ತಳುಕಿನ ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ— ೫

# ಸುವರ್ಣ ಸಂಪುಟ

ಎಚ್. ದೇವೀರಪ್ಪ

# ಆಭಾರ ಮನ್ನಣೆ

ಈ ಸಂಗ್ರಹದಲ್ಲಿನ ಕೆಲವು ಕಥೆಗಳು ಬಹು ಹಿಂದೆಯೇ ಜಯಕರ್ನಾಟಕ ದಲ್ಲಿ ಪ್ರಕಟವಾಗಿದ್ದುವು; ಆಗ ಸಹಸಂಪಾದಕಿಯರಾಗಿದ್ದ ದಿವಂಗತೆ ಶಾಮಲಾ ದೇವಿಯವರ ಉತ್ತೇಜನವೇ ಈ ಕಥೆಗಳ ಮೂಲ. ಅವರನ್ನು ನಾನೆಂದಿಗೂ ಮರೆಯುವಂತಿಲ್ಲ.

ನನ್ನ ಪೂಜ್ಯ ಗುರುಗಳಾದ ತಳುಕಿನ ವೆಂಕಣ್ಣಯ್ಯನವರ ಹೆಸರಿನಲ್ಲಿ ಪ್ರಕಟವಾಗುತ್ತಿರುವ ಗ್ರಂಥಮಾಲೆಯಲ್ಲಿ ಈ ಕಥಾಸಂಗ್ರಹವನ್ನೂ ಸೇರಿಸಿ ಕೊಂಡಿದ್ದಕ್ಕಾಗಿ ಮಾಲೆಯ ಸಂಪಾದಕ ಮಂಡಲಿಯವರಿಗೆ ನಾನು ತುಂಬಾ ಕೃತಜ್ಞನಾಗಿದ್ದೇನೆ.

ನನ್ನ ಗೆಳೆಯ ಬಾಧು ಹೊನ್ನಗಿರಿ ರಾಜಣ್ಣ ಒತ್ತಾಸೆ ನೀಡದಿದ್ದರೆ ಈ ಕಥೆಗಳು ಬೆಳಕಿಗೆ ಬರುತ್ತಿರಲಿಲ್ಲ. ಅವನಿಗೆ ನನ್ನ ಅನಂತ ವಂದನೆಗಳು.

ಈ ಪುಸ್ತಕವನ್ನು ಅಂದವಾಗಿ ಅಚ್ಚುಹಾಕಿಸಿಕೊಟ್ಟ ಉಷಾ ಮುದ್ರಣ ಮಂದಿರದ ಆರ್. ಎನ್. ಹಬ್ಬು ಅವರಿಗೆ ನನ್ನ ಹೃತ್ಪೂರ್ವಕ ವಂದನೆಗಳು.

ಮೈಸೂರು
೨೨—೨—೪೭

ದೇವೀರಪ್ಪ ಮಲ್ಲಿಗೇನಹಳ್ಳಿ

# ಸಂಪಾದಕರ ಮಾತು

**ಸುವರ್ಣ ಸಂಪುಟ** ವೆಂಬ ಈ ಕಥಾಸಂಗ್ರಹದ ಲೇಖಕರು ದಿವಂಗತ ತಳುಕಿನ ವೆಂಕಣ್ಣಯ್ಯನವರ ಶಿಷ್ಯರು. ದಿವಂಗತರ ಶಿಷ್ಯರಾದ ನಾವೆಲ್ಲ ಇಂದಿಗೂ ಅಣ್ಣತಮ್ಮಂದಿರಂತೆ ನಡೆದುಕೊಳ್ಳುತ್ತಿದ್ದೇವೆ. ಎಲ್ಲರನ್ನು ಒಂದೇ ರೀತಿಯಲ್ಲಿ ಕಾಣುತ್ತಿದ್ದ ನಮ್ಮ ಗುರುಗಳ ಈ ಹಿರಿಯಗುಣ ನಮ್ಮ ಬಾಳಿಗೊಂದು ಬೆಳಕಾಗಿದೆ. ಇವೆಲ್ಲಕ್ಕಿಂತಲೂ ಮಿಗಿಲಾಗಿ ದಿವಂಗತರು ಪ್ರಾಚೀನ ಕಾವ್ಯಗಳ ಸಂಪಾದಕರೂ, ಉತ್ತಮ ಬೋಧಕರೂ ಮತ್ತು ವಿಮರ್ಶಕರೂ ಎಂದು ಹೆಸರಾಗಿದ್ದರೂ ಅವರು ಗುಪ್ತವಾಗಿಯೇ ಎಷ್ಟೋ ಜನ ಕವಿಗಳಿಗೂ ಕತೆಗಾರರಿಗೂ ಪ್ರೋತ್ಸಾಹಕೊಟ್ಟಿದ್ದಾರೆ. ಅವರಲ್ಲಿ ಒಬ್ಬಿಬ್ಬರು ಉತ್ತಮ ಕವಿಗಳೆಂದೂ ಕತೆಗಾರರೆಂದೂ ಈಗಾಗಲೇ ಪ್ರಖ್ಯಾತರಾಗಿದ್ದಾರೆ. ಈ ಎಲ್ಲ ಕಾರಣಗಳಿಂದ ಈ ಕತೆಗಳ ಸಂಪುಟ **ತಳುಕಿನ ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ** ಯಲ್ಲಿ ಪ್ರಕಟವಾಗುವುದು ಉಚಿತವಾಗಿದೆ. ಈ ಪ್ರಕಟನೆಯಿಂದ ನಮ್ಮ ಗುರುಗಳ ಆತ್ಮಕ್ಕೆ ತೃಪ್ತಿಯುಂಟಾಗುವುದೆಂದು ನಮ್ಮ ದೃಢವಾದ ನಂಬಿಕೆ.

ಈ ಸಂಪುಟದಲ್ಲಿ ಆರು ಕತೆಗಳಿವೆ. ಈ ಕತೆಗಳಲ್ಲಿ ಒಂದೆರಡನ್ನು ಜೀವನಚಿತ್ರಗಳೆಂದು ಕರೆದರೆ ತಪ್ಪಾಗಲಾರದೆಂದು ತೋರುತ್ತದೆ. ಈ ಕತೆಗಳಲ್ಲಿ ಕಂಡುಬರುವ ಮುಖ್ಯವಾದ ಗುಣಗಳಲ್ಲಿ ಒಂದೆರಡನ್ನು ಇಲ್ಲಿ ನಿರೂಪಿಸಬಹುದು. ಹೊಸಕನ್ನಡ ಸಾಹಿತ್ಯದಲ್ಲಿ ಈಗ ಚಿತ್ರಿತವಾಗುತ್ತಿರುವ—ಒಂದು ದೃಷ್ಟಿಯಿಂದ ನೋಡಿದರೆ ಚರ್ವಿತಚರ್ವಣವಾದ—ಪೇಟೆಯ ಜೀವನವನ್ನು ಓದಿ ಬೇಸರವಾಗಿರುವವರಿಗೆ ಈ ಕತೆಗಳಲ್ಲಿ ಕಂಡುಬರುವ ಒಕ್ಕಲು ಮಕ್ಕಳ ಬಾಳನ್ನು ಕಂಡು ಸಂತೋಷವಾಗುತ್ತದೆ. ವಿಷಯಕ್ಕೆ ಹೊಂದುವಂತೆ ಕತೆಗಾರರು ಬಳಸಿರುವ ಜನಸಾಮಾನ್ಯರ, ಆದರೆ ಗ್ರಾಮವಲ್ಲದ ಭಾಷೆ, ಕತೆಗಳ ನಡುವೆ ಮಿಂಚುವ ತಿಳಿಯಾದ ಹಾಸ್ಯ, ವಿಷಯದ ವಿವರಣೆಗೆ ಸಹಾಯಕವಾಗಿ ಅಲ್ಲಲ್ಲೇ ಬರುವ ಸುಂದರವಾದ ಗಾದೆಗಳು, ಲೇಖಕರ ಹಳ್ಳಿಯ ಬಾಳಿನ ಸೂಕ್ಷ್ಮವಾದ ಅವಲೋಕನ–ಇವೆಲ್ಲ ಇಲ್ಲಿನ ಕತೆಗಳಿಗೆ ಮೆರುಗನ್ನು

ತಂದಿವೆ. ಕತೆಗಾರರಿಗೆ ಒಕ್ಕಲುಮಕ್ಕಳ, ಮೂಕಪ್ರಾಣಿಗಳ ವಿಷಯದಲ್ಲಿ ಸಹಾನುಭೂತಿಯುಂಟು. ಇಲ್ಲಿ ಬರುವ ಶಿವುಗ, ಕೆಂಚ, ಬಸವಯ್ಯ ಇವರೇ ಮೊದಲಾದ ವ್ಯಕ್ತಿಗಳು ನಮಗೆ ಪರಿಚಿತರಾದವರೇ. ಈ ಕಾರಣಗಳಿಂದ ಈ ಕತೆಗಳು ಜನಪ್ರಿಯವಾಗುವುದರಲ್ಲಿ ಸಂದೇಹವಿಲ್ಲ. ಕತೆಗಾರರ ಕಥನಕಲೆ ಇನ್ನೂ ಚೆನ್ನಾಗಿ ಬೆಳೆದು ಅವರ ಲೇಖನಿಯಿಂದ ಇನ್ನೂ ಉತ್ತಮವಾದ ಕತೆಗಳು ಹೊರಬೀಳಲೆಂದು ನಮ್ಮ ಹಾರೈಕೆ.

ಈ ಕತೆಗಳ ಸಂಪುಟವನ್ನು ನಮ್ಮ ಮಾಲೆಯಲ್ಲಿ ಸೇರಿಸಿಕೊಳ್ಳಲು ಅನುಮತಿ ಕೊಟ್ಟ ನಮ್ಮ ಮಿತ್ರರಾದ ಶ್ರೀಮಾನ್ ಎಚ್. ದೇವೀರಪ್ಪನವರಿಗೆ ನಾವು ತುಂಬ ಕೃತಜ್ಞರು.

ಬೃಹಸ್ಪತ್ಯಾಶ್ರಮ
ಮೈಸೂರು
೨೫-೨-೪೬

**ಸಂಪಾದಕರು**

## ಈ ಲೇಖಕರ ಇತರ ಕೃತಿಗಳು ಅಚ್ಚಿನಲ್ಲಿ

೧. ನೀಲಾಂಜನ (ನಾಲ್ಕು ಏಕಾಂಕ ನಾಟಕಗಳು)

೨. ವೀರಸಾಮ್ರಾಜಿ (ಐತಿಹಾಸಿಕ ಕಾದಂಬರಿ)

೩. ಹಳ್ಳಿಯ ಹೂವು (ಸಾಮಾಜಿಕ ಕಾದಂಬರಿ)

೪. ಕಾಣಿ ಮತ್ತು ಇತರ ಕಥೆಗಳು

# ತಳುಕಿನ ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ

## ಪ್ರಕಟವಾಗಿರುವ ಗ್ರಂಥಗಳು

| | | | | | | |
|---|---|---|---|---|---|---|
| ೧. | ಚಂದ್ರಗುಪ್ತ ವಿಜಯ .... | .... | ಬೆಲೆ | ೧ | ೪ | ೦ |
| ೨. | ಉದ್ಯೋಗಪರ್ವ ಸಂಗ್ರಹ .... | .... | ,, | ೧ | ೪ | ೦ |
| ೩. | ಬೇಬಿ ಮತ್ತು ಇತರ ಚಿತ್ರಗಳು .... | .... | ,, | ೦ | ೧೨ | ೦ |
| ೪. | ಆದಿಪರ್ವ ಸಂಗ್ರಹ.... .... | .... | ,, | ೧ | ೮ | ೦ |
| ೫. | ಸುವರ್ಣ ಸಂಪುಟ .... .... | .... | ,, | ೧ | ೪ | ೦ |

## ಅಚ್ಚಿನಲ್ಲಿರುವ ಗ್ರಂಥಗಳು

೧. ಸಭಾಪರ್ವ ಸಂಗ್ರಹ

೨. ಅರಣ್ಯಪರ್ವ ಸಂಗ್ರಹ

೩. ವಿರಾಟಪರ್ವ ಸಂಗ್ರಹ

೪. ನೀಲಾಂಜನ

೫. ಕಥಾವಲ್ಲರಿ

೬. ಕವಿ ರಾಘವಾಂಕ

೭. ಗ್ರೀಕ್ ನಾಟಕ ಕಥೆಗಳು

೮. ಮುದ್ರಾಮಂಜೂಷ ಕಥಾಸಾರ

ಸಂಪಾದಕರು:

**ತ. ವೆಂ. ಸ್ಮಾರಕ ಗ್ರಂಥಮಾಲೆ, ೧೪೦೫ ಕೃಷ್ಣಮೂರ್ತಿಪುರಂ**
**ಮೈಸೂರು**

# ಪರಿವಿಡಿ

# ಸುವರ್ಣ ಸಂಪುಟ

ಅವರನ್ನು ಗಾಂಧೀಜನ, 'ಓದಿಸೋ ಅಯ್ನೋರು' 'ದಾಗ್ದಾರು' 'ಗೋಸಾಯಿಗಳು' ಏನೆಂದಾದರೂ ಕರೆದುಕೊಳ್ಳಿ. ಹೆಸರು ಶಿವದೇವರು. ಅವರು ನಮ್ಮೂರಿಗೆ ಬಂದು ನಾಲ್ಕೈದು ವರುಷಗಳಾಗಿರಬೇಕು. ಪಾಪ, ಆ ಮನುಷ್ಯ ನಮ್ಮೂರಿಗೆ ಬಂದ ತರುಣದಲ್ಲಿ ಎಷ್ಟು ಕಾಟಕೊಟ್ಟೆವು! ಎಂಥ ಅಪಪ್ರಚಾರ ಮಾಡಿದೆವು! ಈಗ ಅದನ್ನೆಲ್ಲಾ ನೆನಸಿಕೊಂಡರೆ ತಲೆ ಎತ್ತುವುದಕ್ಕೆ ಆಗುವುದಿಲ್ಲ. "ಇದೊಂದು ಆಷಾಢಭೂತಿ, ಹಳ್ಳಿಯವರಿಗೆ ಏನೋ ಗಾಣ ಹಾಕುವುದಕ್ಕೆ ಬಂದಿದೆ" ಎಂದೇ ಖಂಡಿತವಾಗಿಯೂ ನಂಬಿದ್ದೆವು. ಹುಡುಗುಜನ! ಕಂಡಕಂಡವರನ್ನೆಲ್ಲಾ ಕರೆದು ಕರೆದು ಅಜ್ಜಾ, ಗೋಸಾಯಿ ಏನೋ 'ಎಪ್ಪೆ' ಹಾಕಿ ಹೋಗೋದಕ್ಕೆ ಬಂದಿದಾನೆ. ಅವನನ್ನ ಖಂಡಿತ ನಂಬಬೇಡಿರಿ, ಅವನ ಹತ್ತಿರ ಸುಳಿಯಲೇ ಬೇಡ್ರಿ, ಹಕ್ಕಿ ಹಿಡಿಯೋದಕ್ಕೆಂದೇ ಅಕ್ಕಿಕಾಳು ಚೆಲ್ಲುತ್ತಾ ಇದ್ದಾನೆ. ಹೀಗೆಲ್ಲಾ ಉಪದೇಶ ತುಂಬುತ್ತಿದ್ದೆವು. ಆದರೆ ಕೆಲವು ತಿಂಗಳುಗಳಾದ ಮೇಲೆ ನಾವು ಮಾಡಿದ ತಪ್ಪಿಗೆ ಮಿಡುಕ ಬೇಕಾಯಿತು, ಕಾರಣ ಶಿವದೇವರ ನಡೆನುಡಿಗಳು ನಮ್ಮನ್ನೂ ಮುಗ್ಧರನ್ನಾಗಿಮಾಡಿದ್ದು. ಹಳ್ಳಿಯ ಬೋಳೀ ಜನದ ಮಾತು ಹೇಳಬೇಕೆ? ಅವರಿಗೆ ಪೂರ್ತಿ ಮರುಳಾಗಿಯೇ ಬಿಟ್ಟರು. ಊರ ಒಂದು ಸಣ್ಣ ಪಿಳ್ಳೆಯಾದಿಯಾಗಿ ಎಲ್ಲರಿಗೂ ಶಿವದೇವರು ಬೇಕಾದವರಾದರು.

ದೊಡ್ಡವರ ಮಾತುನೋಡು ಬಡವರ ಊಟನೋಡು ಎಂದಂತೆ ಇವರ ಉಡಿಗೆತೊಡಿಗೆ ನೋಡತಕ್ಕದ್ದು. ಬಿಳೀ ಖಾದಿಯ ಒಂದು ಜುಬ್ಬ, ಪಂಚೆ, ಮೇಲೊಂದು ಹೊದಿಕೆ, ಮುಗಿಯಿತು. ಅಂತಹ ಆಡಂಬರವೇನಿಲ್ಲ. ಆದರೂ ಆ ಎತ್ತರ, ಆ ಎಣ್ಣೆಗೆಂಪು ಬಣ್ಣ, ದುಂಡುಮುಖ, ಗಿಣಿಮೂಗು, ಮಗುವಿನ ಮನಸ್ಸಿನಂತೆ ನಿರ್ಮಲವಾಗಿರುವ ವಿಶಾಲವಾದ ನೇತ್ರಗಳು ನೋಡಿದವರ ಮೇಲೆ ತಮ್ಮ ಪ್ರಭಾವ ಬೀರಬಲ್ಲುವು. ಅವರು ಅಚ್ಚಗನ್ನಡದಲ್ಲಿ ಮಾತಾಡುವುದನ್ನು ನೋಡಿದರೆ ನೀವು ಇವರಿಗೆ ಇಂಗ್ಲೀಷು ಬರುವುದಿಲ್ಲವೆಂದೇ ತಿಳಿದುಕೊಳ್ಳಬಹುದು. ನಿಗರ್ವಿಗಳು. ಬಹಳ ಸರಳಸ್ವಭಾವ. ನಾವು ಮೊನ್ನೆಮೊನ್ನೆಯ

ವರೆಗೂ ಇವರಿಗೆ ಪಡುವಲ ಕಡೆಯ ಸಂಸ್ಕೃತಿಯ ನೆಳಲೂ ತಾಕಿಲ್ಲವೆಂದೇ ಭಾವಿಸಿದ್ದೆವು. ಇತ್ತೀಚಿಗೆ ಅವರು ಪದವೀಧರರೆಂದು ಗೊತ್ತಾಯಿತು.

ಕಾಯಿಲೆ ಕಸಾಲೆ ಆದವರು ಬಂದರೆ ಅವರನ್ನು ಚನ್ನಾಗಿ ವಿಚಾರಿಸಿ ಆರೋಗ್ಯದ ವಿಷಯದಲ್ಲಿ ಅವರ (ಹಳ್ಳಿಯವರ) ಭಾಷೆಯಲ್ಲಿಯೇ ಮನ ಮುಟ್ಟುವಂತೆ ಒಂದು ಉಪನ್ಯಾಸಮಾಡಿ ಔಷಧಿಯನ್ನೋ ಸೂಜಿ ಮದ್ದನ್ನೋ ಕೊಟ್ಟುಕಳಿಸುತ್ತಾರೆ. ರೋಗಿಗಳು ದುಡ್ಡುಕೊಟ್ಟರೂ ಸರಿಯೇ ಬಿಟ್ಟರೂ ಸರಿಯೇ. ಊರವರ ಕಾಟ ಏನೂ ಇಲ್ಲದಿರುವಾಗ ನೂಲುವುದು ಹಂಜಿ ಮಾಡುವುದು, ಗ್ರಂಥಾವಲೋಕನ. ಬೈಗಿನಲ್ಲಿ ಒಂದೆರಡುಗಳಿಗೆ ವೀಣೆ ನುಡಿ ಸುತ್ತಿರುತ್ತಾರೆ. ಆ ಸಮಯದಲ್ಲಿ ಮಾತ್ರ ಯಾರನ್ನೂ ಒಳಗೆ ಬಿಟ್ಟುಕೊಳ್ಳು ವುದಿಲ್ಲ. ರಾತ್ರಿಹೊತ್ತು ವಯಸ್ಕರಿಗೆ ಅಕ್ಷರಾಭ್ಯಾಸ. ಇದು ನಮ್ಮ ಶಿವದೇವರ ದಿನಚರಿ. ಗಂಡಹೇಡಿರ ಜಗಳ ತೀರಿಸುವ ಯಜಮಾನರವರು. ಗಂಡಿಗೂ ಹೆಣ್ಣಿಗೂ ತಾಳಿಹಾಕುವ ಪುರೋಹಿತರೂ ಅವರೇ. ದೊಡ್ಡ ಮನೆತನಗಳು ಒಡೆದು ಪಾಕಿಸ್ಥಾನ ದ್ರವಿಡಸ್ಥಾನ, ಆಗದಂತೆ ನೋಡಿಕೊಳ್ಳುವ ಹಿತಚಿಂತ ಕರೂ ಅವರೇ.

ಶಿವದೇವರಿಗಾಗಿ ನಮ್ಮೂರವರೆಲ್ಲ ಸೇರಿ ಒಂದು ಮನೆ ಕಟ್ಟಿಕೊಟ್ಟಿ ದ್ದಾರೆ. ಆ ಮನೆಯನ್ನು ಹೊಕ್ಕಕೂಡಲೇ ಮನಸ್ಸಿನ ಮೇಲೆ ಒಂದು ರೀತಿಯ ಅಪೂರ್ವ ಪರಿಣಾಮವಾಗುತ್ತದೆ. ಮನೆಯಲ್ಲಿ ಎಲ್ಲೆಲ್ಲಿಯೂ ಶಾಂತಿ ನೆಲಸಿ ದೆಯೋ ಶಾಂತಿಯೇ ಮನೆಯ ರೂಪುವೆತ್ತಿದೆಯೋ ಹೇಳುವುದು ಕಷ್ಟ. ಅವರ ಮನದಂತೆಯೇ ಆಮನೆ ಎಂದು ಧಾರಾಳವಾಗಿ ಹೇಳಬಹುದು. ನಡುಮನೆ ಯಲ್ಲಿ ಬಾಗಿಲೆದುರಿಗೇ ಅವರ ಆಫೀಸು. 'ಆಫೀಸು' ಎನ್ನಿಸಿಕೊಳ್ಳುವೆಡೆ ಏನೇನು ಸಾಮಾನು ಇರಬೇಕೋ ಅವೆಲ್ಲಾ ಇವೆ ಅಲ್ಲಿ, ಅದರತಂಟೆ ನಮಗೆ ಬೇಡ. ಆದರೆ ಗೋಡೆಗಳ ಕಡೆ ಕಣ್ಣು ಹೊರಳಿಸಿದರೆ ಸುಸಂಸ್ಕೃತ ನೇತ್ರ ಗಳಿಗೊಂದು ಹಬ್ಬ. ಆ ಚಿತ್ರಗಳ ವಿವರಣೆ, ಅವುಗಳ ಚರಿತ್ರೆ, ಅವನ್ನು ಕೊಂಡುತರಲು ಪಟ್ಟಪಾಡು—ಇವನ್ನು ನನಗೆ ಒಂದು ದಿನವೆಲ್ಲ ಹೇಳಿದ್ದರು.

ನಾನು ಊರಿನಲ್ಲಿದ್ದಾಗ ಆಗಾಗ ಅವರ ಮನೆಗೆ ಹೋಗುತ್ತಿರುತ್ತೇನೆ. ಅವರಿಗೂ ನನ್ನನ್ನು ಕಂಡರೆ ಬಹಳ ಇಷ್ಟ. ಹಳ್ಳಿಯವರನ್ನು ಕಂಡರಂತೂ ಅವರಿಗೆ ಬಹಳ ಮರುಕ. ಅವರ ದುಸ್ಥಿತಿ, ಅವರ ಅಜ್ಞಾನ, ಬೋಳೆಯ

ಸ್ವಭಾವ ಕುರಿತು ನನಗೆ ದಿನವೂ ಉಪದೇಶಮಾಡುತ್ತಾರೆ. ನಾನೋ ಹೂಗುಟ್ಟು ತ್ತಿರುತ್ತೇನೆ ಅಷ್ಟೆ. ಜೀವನದ ಕಷ್ಟ-ಸುಖ, ಎಡರುತೊಡರುಗಳು, ದೇವರು, ಜೀವ,-ಜಗತ್ತು ಇನ್ನೂ ಏನೇನೋ ವಿಷಯ ಪ್ರಸ್ತಾಪಿಸುವರು ನನಗೆ ಬೇರೆ ಅರ್ಥವಾಗುವುದಿಲ್ಲ.

ಒಂದು ದಿನ ನಾವಿಬ್ಬರೂ ವಾಯು ಸೇವನೆಗೆಂದು ಹೊರಟವರು ಎಷ್ಟೋ ದೂರ ಸಾಗಿದ್ದೆವು. ಮಾತೂ ಅಷ್ಟೇ ದೂರ ಸಾಗಿತ್ತು. ತಾನೇ ಜೀವನ ಸಮಸ್ಯೆಗಳ ಕಡೆಗೆ ತಿರುಗಿದ್ದಿತು. "ಗುರುಹಿರಿಯರು ಹಾಕಿದ ಗೆರೆಯನ್ನು ದಾಟಿಹೋಗಬಾರದಪ್ಪ, ಹಾಗೆ ಮಾಡಿದರೆ ಬಹಳ ತೊಂದರೆಗಳಿಗೀಡಾಗ ಬೇಕಾಗುತ್ತದೆ....ಯಾವುದಾದರೂ ಒಂದು ಸತ್ಕಾರ್ಯಕ್ಕೇ ಕೈ ಹಾಕಬೇಕಾ ದರೂ ಒಂದಲ್ಲ ಎರಡಲ್ಲ ನಾಲ್ಕಾರು ಬಾರಿಯಾದರೂ ಯೋಚಿಸಿ ತಿಳಿದವರ ಸಲಹೆಯನ್ನು ಕೇಳಿ ಗುರುಹಿರಿಯರ ಆಶಿರ್ವಾದ ಪಡೆದು ಮಾಡಬೇಕು.... ಒಬ್ಬರಿಗೆ ಅಮೃತದಂತೆ ಕಂಡದ್ದು ಇನ್ನೊಬ್ಬರಿಗೆ ವಿಷದಂತೆ ಭಾಸವಾಗ ಬಹುದು.... ಸೊಗದಬಾಳು ಸಿಗಬೇಕಾದರೂ ಪಡೆದು ಬರಬೇಕು" ಹೀಗೆಂದು ಉಸುರ್ಗರೆದರು.

ಆವಾಗ ನನಗೆ ಇವರ ಬಾಳುವೆಯಲ್ಲಿ ಏನೋ ಅರಕೆಯಾಗಿರಬೇಕು ಎನ್ನಿಸಿತು. ಅವರ ನನ್ನ ಪರಿಚಯವಾದಂದಿನಿಂದ ನಾನು ನೋಡಿದ ಅವರ ಮಾತುಕತೆ, ಕೆಲಸ, ಉಡಿಗೆತೊಡಿಗೆ, ದನಿ, ದೃಷ್ಟಿ ಇವೆಲ್ಲಾ ನನ್ನ ಸ್ಮೃತಿ ಪಥಕ್ಕೆ ಬಂದುವು. ಅವರ ಎಲ್ಲ ಚಲನವಲನಗಳ ತಳದಲ್ಲಿ ಗಾಢವಾದ ನೋವು ಕೊರಗು ಗದ್ದುಗೆಯಾಗಿದ್ದಂತೆ ತೋರಿತು. ಇವರ ಬಾಳುವೆಯ ಗಿಡಕ್ಕೆ ಬಂದಳಿಕೆ ಬಡಿದಿರಬೇಕು ಎಂದುಕೊಂಡೆ. ಇಬ್ಬರೂ ಮನೆಗೆ ಬಂದೆವು. ನನಗೇನೂ ಯಾವ ಚಿಂತೆಯೂ ಬಾಧಿಸಲಿಲ್ಲ.

ಮತ್ತೊಂದು ದಿನ. ಅಂದು ನನ್ನ ಮನಸ್ಸು ಓದುವುದರ ಕಡೆಗೆ ಹೊರ ಳಿತ್ತು. ಶಿವದೇವರಲ್ಲಿ ಒಂದು ದೊಡ್ಡ ಪುಸ್ತಕ ಭಂಡಾರವೇ ಇದೆ. ಆ ಪುಸ್ತಕ ಓದು ಈ ಪುಸ್ತಕ ಓದು ಎಂದು ಅವರಾಗಿಯೇ ತಮ್ಮ ಬಳಿ ಇದ್ದ ಗ್ರಂಥ ಗಳನ್ನು ಕೊಡುತ್ತಾರೆ. ಕಥೆಗಿಥೆ ಪುಸ್ತಕ ಇದ್ದರೆ ತರೋಣವೆಂದೇ ಅವರ ಬಳಿಗೆ ಹೋಗಿದ್ದೆ. ಸರಿ, ಹೋದಕೂಡಲೇ ಬೋಧನೆಗೆ ಷುರು. ನಾನೂ ಸ್ವಲ್ಪ ಹೊತ್ತು ಕೇಳಿದ ಹಾಗೆ ಮಾಡಿದೆ. ಅಷ್ಟರಲ್ಲಿ ಯಾರೋ ಓಡುತ್ತ

ಬಂದು "ಸ್ವಾಮಿ, ಗಾಡ ಏಳ್ರಿ, ಗಾಡ ಏಳ್ರಿ, ನಮ್ಮ ಹುಡುಗ್ಗೆ ಹೋರಿ ಹಾದು ಬಿಟ್ಟೈತು. ಪಕ್ಕೆಗೇ ಕೊಂಬು ನೆಟ್ಟುಬಿಟ್ಟೈತೆ. ಏಳ್ರಿ, ಏಳ್ರಿ, ಏಳ್ರಿ, ಹೋಗು ಜೀವ ಬರುಜೀವ ಆಗೇತಾಗಲೇ" ಎಂದರು ಏದುತ್ತ. ಡಾಕ್ಟರು ಆಗಲೇ ಹೊರಡಲು ಸಿದ್ಧವಾದರು. ನಾನು "ಪುಸ್ತಕ...." ಎಂದೆ. ಅವರು "ಇಕ್ಕೋ ಬೀಗದ ಕೈ ತಗೊಳ್ಳಿ" ಎನ್ನುತ್ತ ನನ್ನ ಕಡೆ ಬೀಗದ ಕೈ ಗೊಂಚಲನ್ನು ಎಸೆದು ಹೊರಹೊರಟರು. ಹೊಸ್ತಿಲು ದಾಟಿ ಹೊರಗೆ ಹೋದವರು ಮತ್ತೆ ಒಳಗೆ ಬಂದು ಒಂದು ಟ್ರಂಕಿನ ಕಡೆ ಕೈತೋರಿ "ಆ ಪೆಟ್ಟಿಗೆಯನ್ನು ಮಾತ್ರ ತೆರೆಯಬೇಡಿರಿ" ಎಂದು ಬೇಡಿಕೊಳ್ಳುವ ದನಿ ಕಣ್ಣುಗಳಲ್ಲಿ ಸೂಚಿಸಿ ಹೊರಟುಹೋದರು.

ಅವರು ಹಾಗೆ ಹೇಳದಿದ್ದರೆ ಆ ಪೆಟ್ಟಿಗೆಯನ್ನು ಯಾರು ತೆರೆಯುತ್ತಿದ್ದರು? ಪುಸ್ತಕಗಳಿರುವುದು ಅಲಮಾರಿನಲ್ಲಿ. ಅವರೇ ಹಾಗೆಂದಮೇಲೆ ಕುತೂಹಲ ಕೆರಳಿತು. ಆ ತೆರೆಯಬಾರದ ಪೆಟ್ಟಿಗೆಯನ್ನು ತೆರೆದು ನೋಡಬಾರದ ವಸ್ತುವನ್ನು ನೋಡಿಯೇ ತೀರಬೇಕೆಂಬ ದುರಾಸೆ ಮನದಲ್ಲಿ ಮೂಡಿತು. ತೆರೆದೆ ಪೆಟ್ಟಿಗೆಯ. ಅಲ್ಲಿಯೂ ನಾಲ್ಕಾರು ಉದ್ಗ್ರಂಥಗಳಿದ್ದುವು. ಚೆಲುವಾದ ಹೊದಿಕೆಯ ಪುಟ್ಟ ಪುಸ್ತಕಗಳಿದ್ದುವು ಆದರೆ ನನ್ನ ಕಣ್ಣು ಕುಕ್ಕಿದ್ದು ಮನಸ್ಸನ್ನು ಸೆಳೆದಿದ್ದು ಅಲ್ಲಿದ್ದ ಒಂದು ರಂಗುರಂಗಿನ ಸುಂದರ ಸಂಪುಟ. ಕೈ ಹಾಕಿಯೇ ಬಿಟ್ಟೆ. ಅದರ ಮೇಲು ಹೊದಿಕೆಯೇ ಮನಸೆಳೆಯುವಂತಹದು. ಅಂಚೆಯ ತುಪ್ಪಳಕ್ಕಿಂತ ನವುರಾದ ಆಕಾಶ ವರ್ಣದ ಕಿಂಕಾಬು ವಸ್ತ್ರ; ಅಂಚಿನಲ್ಲಿ ಮಿಂಚುವ ಹೊನ್ನಿನ ಗೆರೆಗಳು. ಮಧ್ಯದಲ್ಲಿ ಸುವರ್ಣ ವರ್ಣದ ನೀಲಾಂಜನ, ಅದಕ್ಕೆ ಐದು ಕುಡಿಗಳು. ಪೆಣ್ಮಣಿಯೊಬ್ಬಳು ಆ ಜ್ಯೋತಿಗೆ ಮಣಿದು ನಮಿಸುತ್ತಿದಾಳೆ. ಇದು ಪುಸ್ತಕದ ಮೇಲ್ಮುಸುಗು. ನೋಡಿದ್ದಾಯಿತು, ಮುಟ್ಟಿದ್ದಾಯಿತು, ತೆರೆದು ನೋಡುವ ಆಸೆ! ತೆರೆದೆ ಶಿವದೇವರ ಎದೆಯನ್ನು ತೆರೆಯುವನಂತೆ. ಒಳಗೂ ಅಷ್ಟೆ: ಒಂದೊಂದು ಗರಿಯೂ ಕಣ್ಣುಮನಗಳನ್ನು ಸೆಳೆಯುವಂತಹದು. ಮುತ್ತುಗಳನ್ನೆ ಸಾಲಾಗಿ ಪವಣಿಸಿರುವಂತೆ ಕಾಣುವ ಮುದ್ದಾದ ಬರವಣಿಗೆ ಆ ಗರಿಗಳಲ್ಲಿ. ಒಂದೊಂದು ಗರಿಯೂ ಸುಂದರ. ಕೆಲವಕ್ಕೆ ಏಳುಬಣ್ಣದ ಸುತ್ತುಕಟ್ಟು. ಮರವೊಂದಕ್ಕೆ ಹೂಬಳ್ಳಿ ಹಬ್ಬಿ ಬರವಣಿಗೆಗೆ ಹೂವು ನೆಳಲು ಸುರಿಸುವುದು, ನಾಲ್ಕಾರು

ಜೋಳದ ದಂಟುಗಳ ಮೇಲೆ ಜೋಡಿ ಜೋಡಿ ಗಿಣಿ ಕುಳಿತಿರುವುದು, ಹೂಗಳ ಸಂತೆ, ಶ್ರಾವಣದ ಹಸಿರು, ಚಂಗನೆ ಚಿಗಿಯುವ ಚಿಗುರು, ಈ ಸುಂದರ ಚಿತ್ರಗಳು ಮುದ್ದು ಬರವಣಿಗೆಯನ್ನು ಓಲೈಸುತ್ತಿದ್ದವು. ಎಷ್ಟೋ ಹೊತ್ತಾದ ಮೇಲೆ ಆ ಬರವಣಿಗೆಯ ಕಡೆಗೆ ಮನ ಹೊರಳಿತು. ಅಲ್ಲಿ ಏನು ಬರೆದಿತ್ತೆಂಬುದನ್ನು ಪೂರ್ತಿಯಾಗಿ ನೋಡುವುದಕ್ಕಾಗಲಿಲ್ಲ. ಶಿವದೇವರು ಬಂದುಬಿಟ್ಟಾರೆಂಬ ಹೆದರಿಕೆಯಿಂದ ಬಹು ತ್ವರೆಯಿಂದ ತಿರುವಿ ಹಾಕಿದೆ ಆ ಸುವರ್ಣ ಪುಟಗಳನ್ನು. ಅಲ್ಲಿ ಬರೆದಿದ್ದು ಏನೆಂಬುದನ್ನು ಹೇಳಬಹುದಾದಷ್ಟನ್ನೂ ಹೇಳುತ್ತೇನೆ.

**೨ನೆಯ ಪುಟ.**

....ನಾವೂ ಅಲ್ಲಿಗೆ ಆಗಾಗ ಬರುತ್ತೇವೆ. ಇನ್ನುಮೇಲೆ ತಪ್ಪದೆ ಬರಬೇಕೆಂದಿದ್ದೇವೆ. ಹಬ್ಬದ ದಿನ....ಸಮಾರಂಭವಾಯಿತಲ್ಲಾ ಅಂದು "ಕರುಣಾಳು ಬಾ ಬೆಳಕೆ" ಎಂಬ ಗೀತೆಯನ್ನು ಹಾಡಿದ್ದು ನಾನೇ. ಸಂಗೀತ ಸಾಹಿತ್ಯಗಳ ಸಮ್ಮಿಲನ ಗಂಗೆಯಮುನೆಯರ ಸಂಗಮದಂತಿತ್ತು" ಎಂದು ನುಡಿದಿದ್ದೀರಿ. ಅದು ಆ ಗೀತೆಯ ಮಹಿಮೆ. ನನ್ನ ಸಂಗೀತ ನನ್ನ ಆ ನೀವು ಹೊಗಳುತ್ತಿರುವ ಕಂಠ ಇವುಗಳ ಪ್ರಭಾವ ಅಲ್ಲ. ಹೊಗಳಿಕೆಯ ರೂಪದಲ್ಲಿ ಸಲಹೆಯಿತ್ತುದಕ್ಕಾಗಿ ವಂದನೆಗಳು....ಅದಕ್ಕೇನಂತೆ! ನಿಮ್ಮಂತೆ ನಿಮ್ಮ ನುಡಿಯಂತೆ ನಿಮ್ಮ ನಡೆಯೂ ಇದ್ದರೆ, ಶೀಲಸೌಜನ್ಯಗಳ ಮೇರೆಯನ್ನು ಮೀರದಂತೆ ಬರೆಯಬಹುದು. ಧಾರಾಳವಾಗಿ. ತಂದೆಯವರು ಅಂತಹ ಸಂಕುಚಿತ ಹೃದಯದವರಲ್ಲ. ನನ್ನ ಹೃದಯದ ಬಗ್ಗೆ ನಾನು....ನಾನು....ಊಹೂಂ ಏನೂ ಬರೆಯುವುದಿಲ್ಲ....

**೫ನೇ ಹಾಳೆ.**

....ಉತ್ತರ ಬರೆಯುವುದು ಬಹಳ ತಡವಾಯಿತು. ಕ್ಷಮಿಸುತ್ತೀರಿ ತಾನೆ? ಏನಾದರೂ ವಿಶೇಷವಿದ್ದರೆ ತಾನೆ ಬರೆಯುವುದು. "ಏಕೆ ಪತ್ರ ಬರಲಿಲ್ಲ?" ಅಬ್ಬಾ! ಏಕೀ ಅಧಿಕಾರವಾಣಿ? ಅದು ಹೋಗಲಿ, ಮರೆತು ಬಿಡುತ್ತೇನೆ. "ನಿಮ್ಮ ಸಂಗೀತವನ್ನು ನೋಡಿದೆ. ಕರ್ಣರಸಾಯನ!"

ಎಂದಿರಿ. ಯಾವ ಸೀಮೆಯಲ್ಲಾದರೂ ಸಂಗೀತವನ್ನು 'ನೋಡು' ತ್ತಾರೆಯೆ? ಅಷ್ಟೊಂದು ಸುಮಧುರವಾಗಿತ್ತೆ ಸಂಗೀತ? ಛೇ! ಸುಳ್ಳು ನೀವು ನಿಜವಾಗಿಯೂ ನನ್ನನ್ನು ಹೊಗಳುತ್ತಿದ್ದೀರಿ, ಅಥವಾ ಹೀಗಲ್ಲ ಹೀಗಿರಬೇಕು ಎಂದು ಹೇಳುವ ನಿಮ್ಮ ರೀತಿಯಿರಬೇಕದು. ನನ್ನ ಸಂಗೀತಕ್ಕಿಂತ ಅಂದು 'ಪ್ರೇಮ ಭೈರವ' ಮುಂತಾದ ಕವನಗಳನ್ನು ಓದಿದ್ದೇ ನಿಜವಾಗಿಯೂ ಚನ್ನಾಗಿತ್ತು. ಓದಿದವರು ತುಂಬಾ ಅನುಭವಿಗಳೆಂದೇ ತೋರುತ್ತದೆ. ಗಮಕವೂ ಒಂದು ಕಲೆ ಎಂಬುದು ನನಗೆ ಅಂದು ಮನವರಿಕೆಯಾಯಿತು. ಕೊನೆಯಲ್ಲಿ ಓದಿದ ಕವನ 'ಅವರ'ದೇ ಅಂತೆ! ಅದನ್ನು ಇನ್ನೊಂದು ಸಲ 'ಅವರ' ಬಾಯಿಂದಲೇ ಕೇಳಬೇಕೆಂಬ ಬಯಕೆಯಾಗಿದೆ.

**೭ನೇ ಗರಿ.**

....ಅದು ನನ್ನ ಅಭಿಪ್ರಾಯವೇ ಅಲ್ಲ ಅಂದ್ರೆ! ನಿಮ್ಮಷ್ಟಕ್ಕೆ ನೀವು ನಿಮಗೆ ಅನುಕೂಲವಾದ ಅರ್ಥವನ್ನು ಕಲ್ಪಿಸಿಕೊಂಡರೆ ಹೇಗೆ? ನಿಮ್ಮನ್ನು ನಾನು ಆ ಮೊದಲು 'ನೋಡಿ' ಯೇ ಇರಲಿಲ್ಲ. "ದುಃಖಸೇತು" ಓದಿದ ದಿವಸವೇ ಪ್ರಥಮ ಸಂದರ್ಶನ. ಆಮೇಲೆ ಮೊನ್ನೆ ತಾವು ಮಾತಾಡುವುದಕ್ಕೆಂದು ಸಭೆಯ ಮುಂದೆ ಬಂದು ನಿಂತು ಏನನ್ನೋ ಹೇಳಹೋಗಿ ಏನನ್ನೋ ಹೇಳಿ ನನ್ನ ಕಡೆಗೆ ತಮ್ಮ ಕಣ್ಣು ಬಿದ್ದು ತಮ್ಮ ಮುಖವೆಲ್ಲಾ ತಾಮ್ರವರ್ಣವಾಯಿತಲ್ಲಾ ಅಂದು. ತಮ್ಮ ಕವನ, ಕಥೆ, ನಾಟ್ಯಗಳ ಪರಿಚಯ ಮಾತ್ರ ಚೆನ್ನಾಗಿದೆ....ಅಂತೂ ಗಂಡಸರೆಲ್ಲಾ ಬಲು ಕೆಟ್ಟವರಪ್ಪ! ಏನೋ ಹೇಳಿದರೆ ಏನೋ ಅರ್ಥ ಕಟ್ಟಿಬಿಡುತ್ತಾರೆ. ಇನ್ನೊಂದು ದುರ್ಗುಣ ಅವರಲ್ಲಿ: ಇನ್ನೊಬ್ಬರ ಚೆಲುವು ಹೊಳವು, ನಡೆನುಡಿ, ದನಿಗಿನಿ ಇವೆಲ್ಲಾ ಏತಕ್ಕೆ ಬೇಕು ಅವರಿಗೆ? ಪರಸ್ತ್ರೀಯರನ್ನು ಹಾಗೆಲ್ಲಾ ಅಂತಹ ಕೆಟ್ಟ ದೃಷ್ಟಿಯಿಂದ ನೋಡಬಾರದು.

**೧೦ನೇ ಗರಿ**

....ಅದು ಏನೇನೋ ಅಣಿಯಿಟ್ಟುಕೊಂಡು ಸಾವಿರ ಕ್ಷೇಮೆ ಬೇಡಿ ಯಾವುದೋ ಹುಡುಗಿಯನ್ನು ಕವಿಯ ಮಾತಿನಲ್ಲಿ ರೂಪಿಸಿ, ಬಣ್ಣಿಸಿ........ ಆಗಬೇಕೆಂದು ಆಶಿಸುಟ್ಟಿದ್ದೀರಿ. ನನಗೇನೋ ಅದರ ಅರ್ಥವೇ ಆಗಲಿಲ್ಲ.

" ಇದೂ ಒಂದು ಕವನವೇನೋ, ಕವನಗಳು ಹೀಗೂ ಉಂಟೇನೋ " ಎಂದು ಕೊಂಡು ಸುಮ್ಮನಾದೆ ಅರ್ಥವಾಗದ್ದರಿಂದ. ತಲೆ ಬಾಚಿಕೊಳ್ಳಲು ಕನ್ನಡಿ ಯನ್ನು ಎದುರಿಗಿಟ್ಟುಕೊಂಡೆ, ಮುಖ ಕಂಡಿತು. ಏನೋ ಶಂಕೆ! ಕಣ್ಣುಜ್ಜಿ ಕೊಂಡು ಇನ್ನೊಂದು ಸಾರಿ ಮುಖ ನೋಡಿಕೊಂಡೆ. ಸಂಶಯ ಇನ್ನೂ ಬಲವಾಯಿತು. ನಿಲುವುಗನ್ನಡಿಯ ಮುಂದೆ ನಿಂತು ನೋಡಿಕೊಂಡೆ. ದೂರ ದಿಂದ ನಿಲುವುಗನ್ನಡಿಯಲ್ಲಿಯೇ ನೋಡಿಕೊಳ್ಳುತ್ತ ಅದರೆಡೆಗೆ ನಡೆದೆ. ಅದೇ ನೀವು ಬಣ್ಣಿಸಿದ ಮುಖ, ಅದೇ ನಡಗೆ! ಸಾಲದ್ದಕ್ಕೆ ಅಂದು ಅದೇ ಬಣ್ಣದ ಸೀರೆ ಕುಪ್ಪಸ! ಬೆರಗು ಹೊಡೆದು ಬೆಪ್ಪಾಗಿ ನಿಂತೆ. ಆಮೇಲೆ ಎಷ್ಟೋ ಹೊತ್ತಾದಮೇಲೆ ಬುದ್ಧಿ ತಂದುಕೊಂಡೆ ಅನ್ನಿ. ಅಯ್ಯೋ ನಿಮಗೆಲ್ಲೋ ಹುಚ್ಚು! ನೋಡಿ ನೀವೆಂಥ ಕೆಟ್ಟವರು. ಇನ್ನು ಮೇಲೆ ದಯವಿಟ್ಟು ಓಲೆ ಬರೆಯಬೇಡಿ.

## ೧೧ನೇ ಓಲೆ

ಮತ್ತೆ ಏನೋ ನೆವದಿಂದ ಓಲೆ ಬರೆದಿದ್ದೀರಲ್ಲಾ! ಅವೊತ್ತು ಇನ್ನೂ ಬಹಳ ಸಿಟ್ಟು ಬಂದಿತ್ತು. ಆಮೇಲೆ ಏಕಾದರೂ ಹಾಗೆ ಬರೆದೆ ಅನ್ನಿಸಿತು.... ಹೌದು ಅವರ ತಂದೆಯವರು ಮಾಡಿದ ಅಧ್ಯಕ್ಷ ಭಾಷಣವನ್ನು ಎಲ್ಲರೂ ಬಹಳ ಮೆಚ್ಚಿಕೊಂಡರು. " ದೇವರಲ್ಲಿ ಭಕ್ತಿ ಸಲ್ಲಿಸುವುದೆಂದರೆ ಅವನಿಗೆ ದೊಡ್ಡ ದೊಡ್ಡ ಹಾರ ತುರಾಯಿ, ಹಣ್ಣು ಕಾಯಿ ಎಡೆ ಒಪ್ಪಿಸುವುದಲ್ಲ; ಅವನಿಗೆ ಮೆಚ್ಚಿಗೆಯಾಗುವಂತೆ ನಡೆದುಕೊಳ್ಳುವುದು. ಯಾರಾದರೂ ನಾಯಕರು ಭಾಷಣ ಮಾಡುತ್ತಿದ್ದರೆ ಅವರ ಭಾಷಣದ ಮಧ್ಯೆ ಕೇಳಿ! ಕೇಳಿ! ಎಂದು ಕೂಗುತ್ತ ಕರತಾಡನ ಮಾಡುವುದಲ್ಲ; ಅವರು ಬೋಧಿಸಿದ್ದುದನ್ನು ಚನ್ನಾಗಿ ತಿಳಿದುಕೊಂಡು ಆ ಅಂಶಗಳನ್ನು ಹೃತ್ಪೂರ್ವಕವಾಗಿ ಒಮ್ಮನಸ್ಸಿನಿಂದ ಕಾರ್ಯ ರೂಪದಲ್ಲಿ ತರಬೇಕೆಂದು ಬೇಡುತ್ತೇನೆ " ಎಂದು ಹೇಳಿದ್ದು ತುಂಬಾ ಮನೋ ವೇಧಕವಾಗಿತ್ತು. ಗೋಮುಖ ವ್ಯಾಘ್ರಗಳಿಗೆ ಒಂದು ಬಲವಾದ ಗುಂಡು ಅದು. ಅವರು ಹೇಳಿದ ಮಾತು ಎಲ್ಲರೂ ಒಪ್ಪತಕ್ಕದ್ದು, ಒಪ್ಪಲೇ ಬೇಕು. ನಮ್ಮ ತಂದೆ ನಿಜವಾಗಿಯೂ ಅಂತಹ ಸುಧಾರಕರೆಂಬುದು ಅಂದೇ ಗೊತ್ತಾಯಿತು, ಆ

ಮುಖಭಾವ, ಭಾಷಾಸರಣಿ, ಹೃದಯ ತುಂಬಿ ಹೊರಸೂಸುತ್ತಿದ್ದ ಆ ಮಾತುಗಳು—ನೋಡಿದ ವೇಳೆ.

ಒಂದು ಸಂಗತಿ: ಒಂದು ದಿನ ನಮ್ಮ ಮನೆಗೆ ಯಾರೋ ಬಂದಿದ್ದರು, 'ಕಪ್ಪುಜನ'. ಅವರ ಪರಿಚಯ ಅಮ್ಮನಿಗಿರಲಿಲ್ಲ. ಆದುದರಿಂದ ಅಮ್ಮ ಸ್ವಾಭಾವಿಕವಾಗಿ ಅವರು ಯಾವ ಜಾತಿಯವರು, ಯಾವ ಪಂಗಡ, ನಮ್ಮವರೇ ಏನು? ಎಂದು ಮುಂತಾಗಿ ತಂದೆಯವರನ್ನು ಕೇಳಿದರು. ತಂದೆಯವರು ಬಹಳ ರೇಗಿಬಿಟ್ಟರು. ಯಾವ ಜಾತಿಯಾದರೇನು ಅವನು ಮನುಷ್ಯರ ಜಾತಿ. ಜಾತಿ, ಜಾತಿ, ಜಾತಿ! ಆ ಕಾಲ ಸತ್ತುಹೋಯಿತು. ಎಲ್ಲರೂ ಒಂದೇ ಎಂಬ ವಿಶಾಲ ಭಾವನೆಯಿರಬೇಕು ಎಂದು ಮುಂತಾಗಿ ಒಂದು ದೊಡ್ಡ ಉಪನ್ಯಾಸವನ್ನೇ ಮಾಡಿದ್ದರು ಅಮ್ಮನ ಮುಂದೆ. ಅದೇ ಉಪನ್ಯಾಸವನ್ನೇ ಮೊನ್ನೆ ಸಭೆಯ ಮುಂದೆ ಮಾಡಿದರು ಅಷ್ಟೆ........ತಾವೇನೂ ಕ್ಷಮೆ ಬೇಡಬೇಕಾಗಿಲ್ಲ. ಅದುವೆ ನನ್ನನ್ನು. ಮೊನ್ನೆ ತಮ್ಮ ಕಣ್ಣು ಕೆರೆ ತುಂಬಿ ಕೋಡಿ ಹರಿಯುತ್ತಿತ್ತು ಕಾರಣ ಗೊತ್ತಾಗಲಿಲ್ಲ........

### ೧೬ನೇ ಓಲೆ

........ತಾವು ಹಿಂದೆ ಬರೆದ ಒಂದು ಓಲೆಯಲ್ಲಿ ಬಣ್ಣಿಸಿದ್ದಿರಲ್ಲಾ ಆ ಹುಡುಗಿಯನ್ನು ಕೇಳಿದೆ. ಆ ಹುಡುಗಿ ಕೇಳಿದ ಕೂಡಲೆ ಬಹಳ ನಾಚಿಕೊಂಡುಬಿಟ್ಟಳು ನಾಚಿಕೆಯ ಬಳ್ಳಿಯಂತೆ. ಇನ್ನೇನೂ ವಿಶೇಷವಿಲ್ಲ.

ಇತಿ ತಮ್ಮ

### ೧೮ನೇ ಗರಿ

ಇಂದು ಅದೇಕೋ ಬಲಗಣ್ಣು ಹಾರುತ್ತಿದೆ. ನಮಗೆ ಅದೆಂತಹ ವಿಪತ್ತು ಕಾದಿದೆಯೋ ದೇವರೇ ಬಲ್ಲ. ಅಲ್ಲದೆ ತಂದೆಯವರಿಗೆ ಈಗೀಗ ನನ್ನನ್ನು ಕಂಡರೆ ಹಾಗೆ ಹಾಗೇ. ನಾನು ಒಂದು ಗಳಿಗೆ ಮರೆಯಾದರೆ ಜೀವ ಹೋಯಿತೇನೋ ಎನ್ನುವಷ್ಟರ ಮಟ್ಟಿಗೆ ಬಡಿದಾಡುತ್ತಿದ್ದ ತಂದೆಯವರು ಪೂರ್ತಿಯಾಗಿ ಬದಲಾಯಿಸಿರುವ ಹಾಗೆ ಕಾಣುತ್ತದೆ. ಅದೇನೋ ಕೇಳಿದರು, ತಂದುಕೊಡುವುದು ಸ್ವಲ್ಪ ತಡವಾಯಿತು, ಅಷ್ಟಕ್ಕೇನೇ ಉರಿಗಣ್ಣಿನಿಂದ ನನ್ನನ್ನು

ಇರಿಯುತ್ತ "ಅಂಕೆಯಿಲ್ಲದ ಕುದುರೆ ಅಗಳ ಹಾರಿತ್ತಂತೆ" ಸಿಡುಕಿದರು. ನನಗೆ ಅವರ ವರ್ತನೆಯ ಅರ್ಥವೇ ಆಗಲಿಲ್ಲ. ಇನ್ನೊಂದು ಸ್ವಾರಸ್ಯವಾದ ಘಟನೆ. ನೆನ್ನೆ ಮಧ್ಯಾಹ್ನ ಒಂದು ಕಾಗದ ಬಂತು. ತಂದೆಯವರು ಮನೆಯಲ್ಲಿರಲಿಲ್ಲ. ಅಮ್ಮ ಆ ಕಾಗದವನ್ನು 'ಓದು' ಎಂದರು. ಬರವಣಿಗೆಯೋ ಆಸ್ಪತ್ರೆಯಲ್ಲಿ ವೈದ್ಯರು 'ಪ್ರಿಸ್ಕ್ರಿಪ್ಷನ್' ಚೀಟಿಯಲ್ಲಿ ಬರೆಯುತ್ತಾರಲ್ಲಾ ಆ ಬರವಣಿಗೆಗಿಂತ ಅತ್ತತ್ತ. ಸರಾಗವಾಗಿ ಓದಲಾಗಲಿಲ್ಲ, ತಡವರಿಸಿದೆ. ಅಮ್ಮ ಕಟಿಯುವ ದನಿಯಲ್ಲಿ "ಇಂತಾ ಕಾಗದಗಳನ್ನು ಓದೋದು ಹೇಗೆ ಬರುತ್ತೆ" ಎಂದರು. ನಾನೇನೋ ಅದನ್ನೆಲ್ಲಾ ಮನಸ್ಸಿಗೆ ಹಚ್ಚಿಕೊಂಡಿಲ್ಲ.

ಇನ್ನೇನೂ ವಿಶೇಷವಿಲ್ಲ. ಈ ಓಲೆಯನ್ನು ಕಂಡ ಕೂಡಲೇ ಒಂದು ಒಳ್ಳೆಯ ಪತ್ರ ಬರಲಿ

ಇತಿ

೨೨

ಆಹಾಹಾ! ಈ ಸಾರಿಯ ಪತ್ರ ಎಷ್ಟು ರಸಭರಿತವಾಗಿದೆಯೋ! ಕಾಗದ ಮಸಿ ಒಂದು ಕೇಡು. ಕಾಲ ನಷ್ಟ. ಎರಡು ದೂರುಗಳು, ಅದೂ ನನ್ನ ಮೇಲೆ. ಏನೂ ಅರಿಯದ ನಿರಪರಾಧಿಗಳನ್ನು ಶರಣು ಬಂದವರನ್ನು ಹಾಗೆಲ್ಲಾ ದೂರಬಾರದು. ನನಗೂ ನನ್ನವರನ್ನು ದೂರುವುದಕ್ಕೆ ಬರುವುದಿಲ್ಲವೇನು? ಮೊನ್ನೆ "ಏಕೆ ಬರಿಗಾಲಿಂದ ಬಂದಿದ್ದೀರಿ" ಎಂದರೆ "ಜೋಡು ಇನ್ನೂ ಬಂದಿಲ್ಲ" ಎಂದುಬಿಟ್ಟಿರಿ. ಎಷ್ಟೋ ಹೊತ್ತಾದಮೇಲೆ ನಮ್ಮಲ್ಲಿ ನುಡಿದ ಮಾತುಕತೆಗಳನ್ನು ತಿರುಗಿ ಮೆಲುಕುಹಾಕುತ್ತಿದ್ದಾಗ 'ಜೋಡು' ಪದದ ಇನ್ನೊಂದು ಅರ್ಥವಾಯಿತು ಈ ಕುಶಾಗ್ರಮತಿಗೆ. ಜೋಡನ್ನು ತುಳಿಯುವ ಹಾಗೆ ನನ್ನನ್ನು ತುಳಿಯಬೇಕೆಂದಿದ್ದೀರೇನು? ತಮ್ಮ ಒಂದು ಆರೋಪಣೆಗೇನೋ ಈಗಲೇ ಸಮಾಧಾನ ಹೇಳಲು ಸಿದ್ಧಳಾಗಿಲ್ಲ. ಇನ್ನೊಂದಕ್ಕೆ ಉತ್ತರಿಸುವೆ. ಅಲ್ಲಾ ಸಾರ್, ನಾನು ಯಾವಾಗಲೂ ಹೆಬ್ಬೆರಳಿಗೆ ಅಂಜನ ಹಚ್ಚಿಕೊಂಡು ದೃಷ್ಟಿಯನ್ನು ಹೆಬ್ಬೆರಳುಗುರಿನ ಮೇಲೆಯೇ ಕೇಂದ್ರೀಕರಿಸಿಕೊಂಡು ನನ್ನ ನಿಧಿ ಎಲ್ಲಿದೆ ನನ್ನ ನಿಧಿ ಎಲ್ಲಿದೆ ಎಂದು ಹುಡುಕುತ್ತ ಕುಳಿತುಕೊಳ್ಳಲೇ? ವೈದೋರು ಶಿವ ದೇವ, ಅವತರಿಸು ದೇವ ಎನ್ನುತ್ತ ತಪಸ್ಸುಮಾಡುತ್ತಿದ್ದು ಪ್ರತ್ಯಕ್ಷವಾಗುವ

ಸಮಯವನ್ನೇ ಕಾದಿರುವುದಕ್ಕಾಗುವುದೆ? ಎಲ್ಲಾ ಸಮಯದಲ್ಲೂ ತಮ್ಮ ವಿಶಾಲನೇತ್ರಗಳಿಗೆ ಹಬ್ಬದುಣಿಸು ನೀಡಲು ಎಲ್ಲಿ ಸಾಧ್ಯ? ಮನೆಯ ಹೊರಗಡೆಯೇ ಅಡ್ಡಾಡುತ್ತಿದ್ದರೆ 'ಹಾರುಗಾಲಹರದೆ' ಎಂದು ಹೆಸರಿಟ್ಟಾರು. ಹುಡುಗಿಯರಿಗೂ 'ಅದೇ ಧ್ಯಾನ' ಎಂದುಕೊಂಡಿರುವಂತೆ ತೋರುತ್ತದೆ. ಮುಂದಿನ ಜನುಮದಲ್ಲಿ ಹೆಣ್ಣಾಗಿ ಹುಟ್ಟಿರಿ, ಆಗ ಗೊತ್ತಾಗುವುದು ಹೆಣ್ಣಿನ ಗೋಳು........ಜಗಳವಾಡುವುದಕ್ಕೆ ಏನೂ ಇರಲಿಲ್ಲ, ಒಂದು ನೆಪತೆಗೆದರು. ಬಹಳ ತುಂಟರು ನೀವು. ಪತ್ರದ ಕೊನೆಯಲ್ಲಿ ಹಾಗೆಲ್ಲಾ 'ಆಡಿ'ದರೆ ನನಗೆ ಕೋಪ ಬರುತ್ತೆ ನೋಡಿ...........

ಇತಿ

« ಧಿಟ್ಟೆ »

೨೪ನೇ ಗರಿ

....ನಿಮಗೆಷ್ಟು ಹುಚ್ಚು? ಏಲು? ಈಗ ಆರು ತಿಂಗಳ ಹಿಂದೆ ನಾನು ಯಾವ ಸಿನೇಮಾಕ್ಕೆ ಹೋಗಿದ್ದೆ, ಯಾರೊಡನೆ ಹೋಗಿದ್ದೆ, ಯಾವ ಸೀರೆ ಯಾವ ರವಕೆ! ಇದನ್ನೆಲ್ಲಾ ನೆನಪಿಟ್ಟುಕೊಂಡಿದ್ದೀರಲ್ಲ. ಈಗ ಕೈಗೆ ಸಿಕ್ಕಿದ್ದರೆ! ಚೆನ್ನಾಗಿ ನಾಲ್ಕು........ತ್ತಿದ್ದೆ. ಆವಾಗಲೂ ಹಕ್ಕಿತ್ತು ಹಾಗೆಲ್ಲಾ ನೋಡಲು?........ನನಗಂತೂ ಈಗೀಗ ಗಿಣಿಗಳನ್ನು ಕಂಡರೆ ಬಹಳ ಇಷ್ಟ; ಅವುಗಳ ಮೂಗು ಎಷ್ಟು ಸುಂದರ! ಖಾದಿ ಧರಿಸುವವರನ್ನು ಕಂಡರಂತೂ ಅಮಿತಾನಂದ. ದೇವರನ್ನು ಕಂಡಾಗ ಆಗುವಷ್ಟು ಹರ್ಷೋನ್ಮಾದವಾಗುತ್ತದೆ. ನಿಮಗೆ ಇನ್ನೊಂದು ಸಂಗತಿ ಹೇಳಲೇ ಇಲ್ಲ. ಖಾದಿ ಈಗ ನೆನಪಿಸಿತು. ಹೋದವರ್ಷ ನಮ್ಮ ತಂದೆಯವರೂ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನಕ್ಕೆ ಹೋಗಿದ್ದರು. ಅಲ್ಲಿ ಯಾರೋ ಅಡಿಗೆಮಾಡುತ್ತಾರಂತೆ, ಕೀಳುಕುಲದವರು. ಊಟಮಾಡುವಾಗ ಜಾತಿಗೀತಿ, ಕುಲಗೋತ್ರ ದಾರಾದತ್ತ ಅಡವಿ ಪಾಲು. ಅಮ್ಮ ಅದನ್ನೆಲ್ಲಾ ಕೇಳಿ ಕಿಡಿಕಿಡಿಯಾದರು. ತಂದೆಯವರು "ಅಯ್ಯೋ ಹುಚ್ಚಿ, ಅದರಲ್ಲೇನಿದೆಯೆ" ಅಂದು ನಕ್ಕುಬಿಟ್ಟರು ನಾನೂ ದನಿಗೊಟ್ಟು 'ಷೋ' ಅಂದೆ. ನೋಡಿ, ನೀವು ತಂದೆಯವರ ವಿಷಯದಲ್ಲಿ ಅಷ್ಟೊಂದು ಅನುಮಾನಪಡುತ್ತೀರಲ್ಲ...........ನಾನು ತಮಗೆ ಬರೆಯುತ್ತಿರುವ ಪತ್ರಗಳು

ಪತ್ರಗಳಲ್ಲ; ನನ್ನ ದಿನಚರಿ, ನನ್ನ ದಿನದಿನದ ಅನುಭವ ಡೈರಿಯಲ್ಲಿ ಮೂಡುವುದರ ಬದಲು ಇಲ್ಲಿ ಮೂಡುತ್ತಿವೆ ಎಂಬ ಅಂಶವನ್ನು ಮರೆಯಬೇಡಿ....

೨೫ನೇ ಗುರು

ಮತ್ತೂ ಆ ಚಿಂತೆ ನಿಮ್ಮನ್ನು ಕರಗಿಸುತ್ತಿದೆಯಲ್ಲಾ ಏನುಹೇಳಲಿ. ನನಗೊಂದೇ ಚಿಂತೆ "ಕೂಡಲ ಸಂಗಮದೇವ ಒಲಿದಾನೋ ಒಲಿಯನೋ" ಎಂಬ ಚಿಂತೆ ಹಾಸಲುಂಟು ಹೊದೆಯಲುಂಟು, ತಲೆದಿಂಬಿಗೂ ಅದೇ. ಅದೇ ನನ್ನ ಬಾಳ ಏಕನಾದದ ತಂತು. ನನ್ನನ್ನು ಕೈಬಿಡಲು ಇದನ್ನೊಂದು ನೆಪ ಮಾಡಿಕೊಳ್ಳುವುದಾದರೆ ಸಂತೋಷ! ದೂರದಿಂದಲೇ ದಿನದಿನವೂ ಗಳಿಗೆ ಗಳಿಗೆಯೂ, ಉಸುರುಸಿರಿಗೂ ನನ್ನೆದೆಯ ಅರಳನ್ನು ನನ್ನ....ನಿಗೆ ಅರ್ಪಿಸುವೆ. ಇಟ್ಟ ಹೆಜ್ಜೆಯನ್ನು ಹಿಂದೆಗೆಯಲು ಎಲ್ಲರೂ ಶಕ್ತರಲ್ಲ, ಎಲ್ಲರೂ ಒಪ್ಪುವುದೂ ಇಲ್ಲ. ಈ ವಿಷಯವನ್ನೆಲ್ಲಾ ಹೆಣ್ಣೇ ಬಾಯಿಬಿಟ್ಟು ಹೇಳಿ ಕಾಗದದಲ್ಲಿ ಮೂಡಿಸುವಾಗ ಅದು ಎಷ್ಟು ಸಂಕಟಕ್ಕೀಡಾಗಿದೆ, ತನ್ನ ಕುಲದ ಮರ್ಯಾದೆಯನ್ನೂ ಮೀರಿ ಬಿಚ್ಚುಮಾತಿನಲ್ಲಿ ವಿಷಯ ತಿಳಿಸಬೇಕಾದರೆ ಅದಕ್ಕೆಷ್ಟು ನೋವು ಅಪಮಾನ ಆಗುತ್ತದೆ ಎಂಬುದನ್ನು ನೀವು ಊಹಿಸಲಾರಿರಿ ಗಂಡಸರು............ತಂದೆಯವರು ಅಂತಹ ಸಣ್ಣವರಲ್ಲವೆಂದು ನೂರುಬಾರಿ ಹೇಳಿದ್ದೇನೆ, ಸ್ವಾಭಿಮಾನಕ್ಕೆ ನೂರುಬಾರಿ ಬರೆ ಕೊಟ್ಟಂತಾಗಿದೆ. ಅಂದು ಅವರೇ ಹೇಳಲಿಲ್ಲವೆ ಭಾಷಣಮಾಡುವಾಗ? ಅವರ ಮಗಳಾದ ನಾನಲ್ಲದೆ ಇನ್ನಾರು ಅವರ ಮಾತನ್ನು ನಡೆಸಬೇಕು? ಇದರಿಂದ ಅವರಿಗೂ ಕೀರ್ತಿ ಬರದೇ? ನುಡಿದಂತೆ ನಡೆದವರೇ ಅಲ್ಲವೆ ನಿಜವಾದ ಸುಧಾರಕರು.... ಇತ್ತೀಚಿಗೆ ಓಲೆ ಬರೆಯುವುದಕ್ಕೆ ಸಂತೋಷವಾಗುತ್ತದೆ. ಕೊಯಿಲಿಗೆ ಬಂದ ಬತ್ತದ ಸಸಿ ಬಗ್ಗುತ್ತದೆಯಂತೆ, ನಾಚಿಕೆಯಿಂದ. ಇನ್ನೇನು ಬರೆಯಲಿ?? ಏನೂ ಇಲ್ಲ.

ಇತಿ
ನಿಮ್ಮವಳು.

೨೬ನೇ ಶುಕ್ರ

ನಗು ಬರುತ್ತೆ ನೀವು ಕೊರೆದಿರುವುದನ್ನು ನೋಡಿ. ನೀವು ಇಲಿಯ ಬಿಲದಲ್ಲಿ ಅವಿತುಕೊಂಡಿದ್ದರೂ ಹುಡುಕಿ ಕಣ್ಣಿನಲ್ಲಿ ಹಾಕಿಕೊಳ್ಳುವುದನ್ನು

ಬಿಡುವವಳಲ್ಲ ನಾನು. ಇನ್ನು ಅಪ್ರೇಕ್ಷಕರ ಗುಂಪಿನಲ್ಲಿ ಹುಡುಕುವುದೊಂದು ಕಷ್ಟವೆ? "ದುಷ್ಯಂತ ಶಕುಂತಳೆಯರ ಪ್ರೇಮವು ಆವಿರ್ಭಾವವಾಗಿದ್ದು ಋಷ್ಯಾಶ್ರಮದ ಪವಿತ್ರ ವಾತಾವರಣದಲ್ಲಿ" ನಿಜ, ಹೋಲಿಕೆಯು ಅಲ್ಲಿಗೇ ನಿಂತು ಬಿಡಲಿ.......ಪದವೀಧರರಾಗಿರುವುದಲ್ಲದೆ ಪಾಂಡಿತ್ಯವನ್ನೂ ಗಳಿಸಬೇಕೇನೊ, ಮುದುಕರಾಗುವತನಕ ಓದುತ್ತಲೇ ಇರಿ. ಆ ಶಾರದೆಯೊಬ್ಬಳು!

ಏನೂ ಓದಿಲ್ಲ. ಪರೀಕ್ಷೆಗೇ ಹೋಗಬಾರದೆಂದಿದ್ದೆ. ಹನ್ನೆರಡು ರೂಪಾಯಿ ಸುಮ್ಮನೆ ದಂಡವಾಗುವುದೇಕೆಂದು "ಓದುವ ಶಾಸ್ತ್ರ" ಮಾಡುತ್ತಿದ್ದೇನೆ....ಏನೋ ಬೇಸರ........ನಿಮ್ಮೊಡನೆ ಏನೇನೋ ಹೇಳಬೇಕೆಂದು, ಮಾತಾಡಬೇಕೆಂದು ಮನಸ್ಸಿನಲ್ಲಿಯೇ ಗುಣಾಕಾರ ಹಾಕಿಕೊಂಡು ಬರುತ್ತೇನೆ. ನಿಮ್ಮನ್ನು ಕಂಡಕೂಡಲೇ ಎಲ್ಲಾ ಮರೆತುಹೋಗುತ್ತದೆ. ನನ್ನನ್ನೂ ಮರೆತುಬಿಡುತ್ತೇನೆ. ನಾನೇನುಮಾಡಲಿ? ಅದು ನನ್ನ ತಪ್ಪೆ? ಇತ್ತೀಚಿಗಂತೂ ನನ್ನ ಮನಸ್ಸಿನ ಯೋಚನಾತರಂಗಗಳನ್ನೂ ಹೃದಯದಲ್ಲಿ ಮೂಡಿದ ಭಾವನೆಗಳನ್ನೂ ಒಂದೂ ಬಿಡದೆ ತಮ್ಮೆದುರಿಗೆ ಬಿಚ್ಚಿ ಇಡೋಣ ಎನ್ನಿಸುತ್ತದೆ. ಮಾಡಿದ್ದು ನೋಡಿದ್ದು ಆಡಿದ್ದು ಎಲ್ಲವನ್ನೂ 'ಚಾ ಚೂ' ತಮಗೆ ವರದಿ ಒಪ್ಪಿಸಬೇಕೆಂಬ ಇಷ್ಟ. ಇನ್ನಾರಿಗೆ ಹೇಳಲಿ?

## ೩೧ನೇ ಗುರು

ನಿನ್ನೆ ಬಹಳ ಗಡಿಬಿಡಿಯಾಯಿತು. ಯಾರನ್ನೋ ನೋಡುವುದಕ್ಕೆ ಹೋಗಬೇಕಾಗಿತ್ತು ನಮ್ಮಮ್ಮ. ಅವರ 'ಜೊತೆಗೆ' ನಾನು ಹೋಗಬೇಕಾಗಿತ್ತು. ಆದುದರಿಂದ ನಿಮ್ಮೊಡನೆ ಬಹಳ ಹೊತ್ತು ಮಾತಾಡುವುದಕ್ಕೆ ಆಗಲಿಲ್ಲ, "ಮಿಂಚಿ ಮಾಯವಾಗ" ಬೇಕಾಯಿತು. ದಯವಿಟ್ಟು ಕ್ಷಮಿಸಿ ಶಿವ. ಪಾಪ! ಅದೆಷ್ಟು ಹೊತ್ತು ತೆಗೆದುಕೊಂಡಿದ್ದಿರೋ ಸಿಂಗಾರ ಮಾಡಿಕೊಳ್ಳುವುದಕ್ಕೆ! ಹುಡುಗರಿಗೂ ಇನ್ನು ಮೇಲೆ 'ಪೌಡರ್ ಸ್ನೋ ಶೋಭಿತ....' ಅಂತ ಕರೆಯಬೇಕಾಗುವುದೋ ಏನೋ. ತಾವು ಅಷ್ಟು ನಾಜೂಕಾಗಿ ಅಲಂಕಾರಮಾಡಿಕೊಂಡದ್ದೆಲ್ಲಾ ಹೊಳೆಯಲ್ಲಿ ಬೆಲ್ಲ ಕದಡಿದಂತಾಯಿತು. ಹೃತ್ಪೂರ್ವಕ ಸಂತಾಪಗಳು..........ಓಹೊ, ಮುಖ್ಯವಾದ ಸ್ವಾರಸ್ಯವಾದ ಸುದ್ದಿಯನ್ನೇ ಹೇಳಲಿಲ್ಲ. ಸಂತೋಷಕರವಾದ ಸಮಾಚಾರ! ಅದು

ಎಲ್ಲಿಗೆ ಹೋಗಿದ್ದರೆಂಬುದನ್ನು ಹೇಳುತ್ತೇನೆ. ಅದು ಯಾರೋ ನಮ್ಮ ದೂರದ ಸಂಬಂಧವಂತೆ, ಅವರ ಮನೆಗೆ. ಹಣವಂತರಂತೆ, ಅವರ ಮನೆಯಲ್ಲಿ ಒಂದೇ ವರ ಇದೆಯಂತೆ, ಚೆನ್ನಾಗಿದೆಯಂತೆ, ಪದವೀಧರನಂತೆ, 'ನವೀನ ಯುವಕ'ನಂತೆ. ತಮ್ಮ ಸಲಹೆಯೇನು!...........

ಇತಿ

ನಿಮ್ಮವಳು.

## ೩೩ನೇ ಗರಿ

....ನಾನು ಊಹಿಸಿದ್ದಂತೆಯೇ ಆಯಿತು. ಅಂದೇ ನನಗೆ ಅದರ ಸುಳಿವು ಗೊತ್ತಾಗಿತ್ತು. ನಾನೇ ಏಕೆ ಇಲ್ಲದ ಸಲ್ಲದ ಅರ್ಥ ಕಲ್ಪಿಸಬೇಕು ಎಂದು ಕೊಂಡು ಸುಮ್ಮನಿದ್ದೆ. ತಮಗೂ ಹೇಳಲಿಲ್ಲ. ಇಂದು ಆ ವಿಷ ಬೀಜ ಮೊಳೆತು ಮೇಲೆದ್ದಿದೆ. "ತಂದೆಯವರು ರೇಗಿಬಿಟ್ಟಿದ್ದರು. ಕಣ್ಣು ಕೆಂಡ ಕಾರುತ್ತಿದ್ದವು" ಅಂತ ತಮಗೆ ಬರೆದಿದ್ದೆನಲ್ಲಾ ಅದರ ಹಿಂದಿನ ದಿನವೆಂದು ಕಾಣುತ್ತದೆ. ನಾನು ತಮ್ಮ ಓಲೆಯನ್ನು ಅದೆಷ್ಟನೆಯ ಸಾರಿಯೋ ಓದಿ 'ಉನ್ಮತ್ತ'ಳಾಗಿ ಆ ಕಾಗದವನ್ನು ಮೇಜಿನ ಮೇಲೆಯೇ ಮರೆತು ಬಿಟ್ಟು ಊಟಕ್ಕೆ ಹೋಗಿದ್ದೆ, ನಾನೊಂದು ಬೆಪ್ಪು. ತಂದೆಯವರು ಅಕಸ್ಮಾತ್ ನನ್ನ ಕಿರುಮನೆಗೆ ದಯಮಾಡಿಸಿ ಮೇಜಿನ ಮೇಲಿದ್ದ ತಮ್ಮ ಕಾಗದವನ್ನು ಓದಿಕೊಂಡು ಅದನ್ನು ಅಲ್ಲಿಯೇ ಇಟ್ಟು ಹೋದರಂತೆ. ಶಾರಿಯಿಂದ ಈ ವಿಷಯ ಗೊತ್ತಾಯಿತು. ಆವಾಗಿನಿಂದಲೇ ಎಲ್ಲರಿಗೂ ನನ್ನ ವಿಷಯದಲ್ಲಿ ಸಂಶಯ, ಎಲ್ಲಿ ಅಡ್ಡದಾರಿ ಹಿಡಿಯುವಳೋ ಎಂದು. ನನ್ನ ಹೊರೆ ನನ್ನ ಹೋರೆ ನನಗೆ ಗೊತ್ತಿಲ್ಲವೆ? ವಿದ್ಯಾಭ್ಯಾಸ ಮಹಿಳೆಯರನ್ನೇ ಮೃಗಗಳನ್ನಾಗಿ ಮಾಡುತ್ತದೆಯೇ? ಆ ನಂಬಿಕೆ ಇದ್ದರೆ ಓದಿಸುವುದನ್ನೇ ಬಿಟ್ಟುಬಿಡಬಹು ದಾಗಿತ್ತು........ಅಮ್ಮನೇನೋ ಅಂದಿನಿಂದ ನನ್ನೊಂದಿಗೆ ಊಟಕ್ಕೇ ಕುಳಿತು ಕೊಳ್ಳುವುದಿಲ್ಲ. ಏನೇನೋ ನೆವ ತೆಗೆದು ನನಗೆ ಅನ್ನುತ್ತಲೇ ಇರುತ್ತಾರೆ. ತಂದೆಯ ಕುರುಡೂ ಸದ್ಯದಲ್ಲೇ ಗೊತ್ತಾಗಬಹುದು. ಅಮ್ಮನಂತೂ ಯಾವಾಗಲೂ ನನ್ನನ್ನು ಹುಡುಕು ನೋಟದಿಂದಲೇ, ಸಂಶಯದ ಕನ್ನಡಕ ಹಾಕಿಕೊಂಡೇ ನೋಡುವರು. ಆವಾಗ ನನಗೆ ಎಷ್ಟು ಅವಮಾನವಾದಂತಾಗು

ತ್ತದೆ ಬಲ್ಲಿರಾ? ಗಂಡಸರು ಊಹಿಸಲಾರಿರಿ. ಅವರ ತಲೆಯಲ್ಲಿ ಯಾವ ದೆವ್ವ ಹೊಕ್ಕಿದೆಯೋ ದೇವರೇ ಬಲ್ಲ...........

೩೪ನೇ ಗರಿ

ತಮಗೆ ಹಿಂದೆಯೇ ತಿಳಿಸಿರಲಿಲ್ಲವೇ ಅಂದು ಯಾರ ಮನೆಗೋ ಹೋಗಿದ್ದೆವೆಂದು? ಆ ಹುಡುಗನನ್ನು ನಮ್ಮ ಮನೆಗೆ ಕರೆತಂದಿದ್ದರು. ಒಳ್ಳೆಯ ಚೆಲುವ, 'ಅಪ್ ಟು ಡೇಟ್', ವಿದ್ಯಾವಂತ, ಜೊತೆಗೆ ಹಣವಂತ. ಇನ್ನೇನುಬೇಕು. ಯಾವ ವಿಷಯದಲ್ಲೂ ಹೋಕು ಎಣಿಸುವಂತಿಲ್ಲ, ತಪ್ಪು ತೆಗೆಯುವಂತಿಲ್ಲ. ಮನೆಯವರ ಒತ್ತಾಯವು ಹೆಚ್ಚಾಗುತ್ತಿದೆ. ನನ್ನ ಮೌನವನ್ನೇ ಸಂಪೂರ್ಣ ಸಮ್ಮತಿಯೆಂದು ಭಾವಿಸಿದರೆ ಆಯಿತು ನನ್ನ ಗತಿ. ಅವರು ನನ್ನ ಸಮ್ಮತಿ ಕೇಳುವುದು "ಶಾಸ್ತ್ರ"ಕ್ಕೆ. ಉತ್ತರಕ್ಕಾಗಿ ಅವರು ಕಾಯುವುದೂ ಇಲ್ಲ. "ನಾವು 'ತಿಳಿಸಿದ' ಮೇಲೆ ಆಕೆ ಸಮ್ಮತಿ ಇತ್ತಂತೆಯೇ" ಎಂದುಕೊಂಡಿರಬೇಕು. ಇಂತಹ ಸಮಯದಲ್ಲಿ ನಾನೇ ಮುಂದುವರಿದು ನನ್ನ ಅಭೀಷ್ಟವನ್ನು ಬಾಯಿಬಿಟ್ಟು ಹೇಳಿದರೆ ತಾಯಿತಂದೆಗಳು ಏನೆಂದುಕೊಳ್ಳುವರೋ? ಜನ ಏನೆಂದುಕೊಳ್ಳುವರು? ನೀವೋ! ನಿಮ್ಮ ಓದಾಯಿತು, ನೀವಾಯಿತು. ಮುಂದಾದರೂ ಹೀಗೇ ತಾನೇ ನೀವು ನನ್ನನ್ನು ನೋಡಿಕೊಳ್ಳುವುದು? ಓದಿ, ಚೆನ್ನಾಗಿ ಓದಿ, ಯಾರು ಬೇಡವೆನ್ನುತ್ತಾರೆ. ಆದರೆ ಹೊತ್ತಿಗೆ ಯಾರು ಆಗಬೇಕು ಯೋಚಿಸಿ. ಯಾರು ಹೊತ್ತಿಗೆಯಾಗ ಬೇಕೊ ಅವರು ಆದರೆ ಚೆನ್ನು............"ಇನ್ನು ಆರು ತಿಂಗಳು ಹೇಗಾದರೂ ಮಾಡಿ ಕಾಲ ತಳ್ಳಿದರೆ ಯಾವ ಪ್ರತಿಬಂಧಕವೂ ಇರುವುದಿಲ್ಲ ಕಾನೂನು ರಕ್ಷಿಸಬಲ್ಲುದು" ಸರಿ ಒಪ್ಪಿದೆ. ಅಷ್ಟರೊಳಗೇ ಏನಾದರೂ ಅನಾಹುತಗಳು ಸಂಭವಿಸಿದರೆ! ನನಗೇಕೊ ಈಗೀಗ ಬಹಳ ಹೆದರಿಕೆ. ಮನೆಯವರು ದಿನಾಲೂ ಒಂದಲ್ಲ ಒಂದು ರೀತಿಯಿಂದ ಆ ಹುಡುಗನ ಮತ್ತು ಅವರ ಮನೆಯವರ ಗುಣಗಾನ ಮಾಡಿದ್ದು ಮಾಡಿದ್ದೇ. ಅವರ ಸಕಲಸಂಪತ್ತುಗಳ ಪಟ್ಟಿಯನ್ನು ಮಾಡುವುದೇ ಅವರ ದಿನಚರಿಯಾಗಿದೆ. ಎಲ್ಲವೂ ನಮ್ಮೆದುರಿಗೆ ನಡೆಯಬೇಕೇನೊ? ನನಗಂತೂ ಪಿತ್ತ ನೆತ್ತಿಗೇರಿಬಿಡುತ್ತದೆ, ಅಂಗಾಲಿಂದ ನಡು ನೆತ್ತಿಯವರೆಗೂ ವ್ಯೆಯುರಿಯುತ್ತದೆ. ಅವರು ಮಾಡುವುದನ್ನು

ನೋಡಿ........ಮೊನ್ನೆ ರಾತ್ರಿ ಊಟಮಾಡುತ್ತಿರುವಾಗ ನನ್ನ ಚಿಕ್ಕ ತಮ್ಮ ಒಂದು ಕಥೆ, ಅಲ್ಲ ನಡೆದ ಸಂಗತಿ ಹೇಳಿದ. ದುರಂತ ಹೃದಯವಿದ್ರಾವಕ ಸಂಗತಿ. ಅವರ ತಾಯಿತಂದೆಗಳು ಅವರಿಬ್ಬರ ಮಧ್ಯೆ ಅಡ್ಡ ಬಂದದ್ದರಿಂದ ಇಬ್ಬರೂ ಮರಕ್ಕೆ ನೇತು ಹಾಕಿಕೊಂಡು ಸತ್ತರಂತೆ ದಡ್ಡರು! ಬಾಳಲಾರದವರು! ಎಳಸುಗಳು. ಅಮ್ಮ ಆ ಸಮಯದಲ್ಲಿ ಏನೆನ್ನಬೇಕು? ಕಿರುಗಣ್ಣಿನಿಂದ ನನ್ನನ್ನು ಇರಿಯುತ್ತ "ಮೆಚ್ಚಿ ಮದುವೆಯಾಗುತ್ತೇವೆ ಅಂದರೆ ಅದೇ ಗತಿ" ಹೇಗಿದೆ ಅಮ್ಮನ ಆಶೀರ್ವಾದ. ಇನ್ನೂ ಏನೇನೋ ಅನ್ನುತ್ತಿರುತ್ತಾರೆ ಅವನ್ನೆಲ್ಲಾ ಹೇಳಬಾರದು, ಮನೆತನದ ಗುಟ್ಟು.........

ಇತಿ

ಎಂದೆಂದಿಗೂ ನಿಮ್ಮವಳು, ಶಾಂತಿ.

**೩೬ನೇ ಗರಿ**

ಏಕೆ, ಮೊನ್ನೆ ದರ್ಶನವೀಯಲಿಲ್ಲ? ಮತ್ತೆ ಯಾವುದಾದರೂ ಹಕ್ಕಿ ಕಣ್ಣಿಗೆ ಬಿತ್ತೊ? ಹಾಗೇನಾದರೂ ಇದ್ದರೆ ಆಯಿತು ನನ್ನ ಗತಿ......ಅಮ್ಮ ಹೇಳಿದರು ತಾವು ಕಮ್ಮಿ ಜಾತಿಯವರಂತೆ. ನಮ್ಮದು ಅಪರಂಜಿಯಂತ ಜಾತಿಯಂತೆ. ತಂದೆಯವರೂ ಈ ಕಾರಣದಿಂದಲೇ ನನ್ನ ಮೇಲೆ ಸಿಡುಕುತ್ತಿರಬೇಕು. ಅಲ್ಲದೆ ಇನ್ನೊಂದು ರೋಗ ಮುದುಕರಿಗೆ. ಹುಡುಗರಿಗೆ ಒಂದು ರೀತಿಯ ಹುಚ್ಚಾದರೆ ಮುದುಕರಿಗೆ ಮಾನದ ಹುಚ್ಚು. ನನ್ನ ಮಾನ ಎಲ್ಲಿ ಕಳೆದುಬಿಡುವಳೋ ಎಂದು ಅಷ್ಟೊಂದು ರೇಗಿದರೆಂದು ತೋರುತ್ತದೆ. ಮೊದಲು ಅವರೇ ಮನೆಯಲ್ಲಿ, ಮಠದಲ್ಲಿ, ಸಭೆಗಳಲ್ಲಿ ಅಷ್ಟೆಲ್ಲಾ ಉಪದೇಶ, ಭಾಷಣಮಾಡುತ್ತಿದ್ದರು, ಈಗ ಯಾಕೋ ಇಂತಹ ಮೂರ್ತಿಯಾಗಿದ್ದಾರೆ. "ಜಾತಿ!" ಹುಟ್ಟುತ್ತ ಹುಲ್ಲಾಗಿ ಬೆಳೆಯುತ್ತ ಬೆಳೆಯುತ್ತ ಬಿದಿರಾಗಬೇಕು, ಇದು ಸೃಷ್ಟಿ ನಿಯಮ. ಯಾವುದೋ ಕಾಲದಲ್ಲಿ ಬಿದಿರು ಬೆಳೆದಿದ್ದ ಎಡೆಯಲ್ಲಿ ಹುಲ್ಲು ಬೆಳೆದುಕೊಂಡಿದ್ದು ಆ ಹುಲ್ಲೇ "ನಾನು ಬಿದಿರು, ನಾನು ಬಿದಿರು ಜಾತಿ" ಎಂದು 'ಹೇಳಿ'ಕೊಂಡರೆ ಹುಲ್ಲು ಹೋಗಿ ಬಿದಿರಾಗುತ್ತದೆಯೆ? ಇನ್ನು ಯಾವ ವಿಷಯದಲ್ಲೂ "ತುಟಿ ಎರಡು" ಮಾಡುವ ಹಾಗಿಲ್ಲ. ತಮ್ಮ ಜಾತಿ ಮಾತ್ರ ಸ್ವಲ್ಪ "ಬಿಡತಿ" ಅಂತೆ. ಅವರ ಜಾತಿ—ನನ್ನ

ಜಾತಿಯೇನು ಗೊತ್ತಿದೆಯಲ್ಲ—ಜಗತ್ತಿನಲ್ಲೆಲ್ಲಾ ಶ್ರೇಷ್ಠವಾದುದಂತೆ. ನಮ್ಮನ್ನಾಳುವ ಸಾರ್ವಭೌಮರ ಜಾತಿಯೂ ನಮ್ಮ ಜಾತಿಗಿಂತ ಕೀಳಂತೆ!

ಮೊನ್ನೆ ಒಂದು ಘಟನೆ. ತಂದೆಯವರು ಪುನಃ ಆ ಮಾತೆತ್ತಿದರು. ಎದುರುತ್ತರ ಕೊಟ್ಟೇಬಿಟ್ಟೆ. ಸಮಾಜದಲ್ಲಿ ನನ್ನ ಸ್ಥಾನವೇನು ನನ್ನ ಮಾನವೇನು? ನಿನ್ನಿಂದ ನನ್ನ ಮನೆತನಕ್ಕೆ ಮರ್ಯಾದೆ ಬರುವುದಿಲ್ಲ; ಹಾಗೆ ಹೀಗೆ ಎಂದು ಮಾರುದ್ದ ಉಪನ್ಯಾಸಮಾಡಿದರು. ಅದೂ ಏತಕ್ಕೆ ಗೊತ್ತೆ ಅಷ್ಟುದ್ದ ಉಪನ್ಯಾಸ? ಆ ಹುಡುಗನನ್ನು ಒಲ್ಲೆ ಎಂದದ್ದಕ್ಕೆ. ಒಲ್ಲೆ ಎಂದಕೂಡಲೇ ಅವರು ತಮ್ಮ ಸ್ಥಾನದಿಂದ ಕೆಳಗುರುಳಿಬಿಡುವರೆ? ನಿಮ್ಮ ವಿಷಯ ಎಲ್ಲಾ ಗೊತ್ತಾಗಿದೆ ಆಗಲೇ. ಅದಕ್ಕೇ ಅಮ್ಮನು 'ಜಾತಿ'ಯ ವಿಷಯವನ್ನು ಯಾವುದೋ ನೆಪದಿಂದ ತೆಗೆದಿದ್ದು, ಮತ್ತು ತಂದೆಗೆ ಸ್ಥಾನ ಮಾನಗಳ ಹುಚ್ಚು.

ಪತ್ರ ಉದ್ದವಾಯ್ತೇನೋ. ಸಾಕು ಇವೊತ್ತಿಗೆ.

ಇತಿ

## ೩೯ನೇ ಹಾಳೆ

ಇಂದು ಬರೆಯುವುದಕ್ಕೆ ವಿಷಯ ಏನೂ ಇಲ್ಲ. ಬರೆಯದೆ ಇದ್ದರೆ ತಪ್ಪುಹೊರಬೇಕಾದೀತೆಂದು ಕೊರೆಯುತ್ತಿದ್ದೇನೆ. ನಿನ್ನೆ ಅಮ್ಮನೊಡನೆ ವಾಯು ವಿಹಾರಕ್ಕೆ ಹೊರಟ್ಟಿದ್ದೆವು. ಬಹಳ ದೂರ ಹೋಗಿದ್ದೆವು. ಅಲ್ಲೊಂದು ಚಿಕ್ಕ ಹಳ್ಳ, ನೀರು ಹರಿಯುತ್ತಿತ್ತು. ಎಷ್ಟು ಆಳ ಅಂತೀರಾ? ನನ್ನ ಹೆಜ್ಜೆ ಮುಳುಗುವಷ್ಟು! ಹಳ್ಳದ ಈಚೆಯ ದಂಡೆಯ ಮೇಲೆಯೇ ತುಸು ಹೊತ್ತು ಕುಳಿತಿದ್ದೆವು. ಆಚೆಯ ದಂಡೆಯಲ್ಲಿ ಒಂದು ಕೇದಿಗೆಯ ಬನ. ಅದರಲ್ಲಿದ್ದ ಮೂರು ನಾಲ್ಕು ಕೇದಿಗೆಯ ತೆನೆಗಳು ಕಣ್ಣು ಕೋರೈಸಿದುವು, ಹತ್ತಿರ ಹೋಗಿ ಕೈಚಾಚಿದರೆ ಸಾಕು ಸಿಗುವೆವೆನ್ನುತ್ತಿದುವು. ನಾನು ಕೆಟ್ಟವಳು ತಾನೆ! ಸುಂದರವಾದ, ನಯನಮನೋಹರವಾದ ಪುಷ್ಪವನ್ನು, ನರುಗಂಪು ಬೀರುತ್ತಿರುವ ನವಕುಸುಮವನ್ನು ಕಂಡರೆ ದಾರಿತಪ್ಪಿಯಾದರೂ ಹೋಗಿ ಕಿತ್ತುಕೊಂಡು ಮುಡಿದುಕೊಳ್ಳುವಷ್ಟೆ! (ಅಮ್ಮನು ಅಂದದ್ದನ್ನೇ ಇಲ್ಲಿ ಸ್ವಲ್ಪ ಬೆಡಗಿನಿಂದ ಹೇಳಿದ್ದೇನೆ) ಓಡಿದೆ ಬನದೆಡೆಗೆ. ಇನ್ನೇನು

ಹೂವಿಗೆ ಕೈಹಾಕಬೇಕು, ಬುಸ್ಸೆಂದು ಎದ್ದಿತು ಒಂದು ನಾಗರಹಾವು. ಹೆಡೆ ಯೆತ್ತಿದೆ, ನಾಲಗೆ ಚಾಚಿದೆ, ನೆಟ್ಟಗೆ ನಿಮಿರಿ ನಿಂತಿದೆ, ಒಂದು ಗೇಣು ಬಾಲ ಮಾತ್ರ ನೆಲದ ಮೇಲಿದೆ. ಕಾಲಯಮನ ಬಿಲ್ಲಿನಂತೆ ಸೆಡೆದು ನಿಂತಿದೆ! ಅಯ್ಯೋ! ಹಾವು! ಎಂದು ಚೀರುತ್ತ ಒಂದೇ ಉಸುರಿಗೆ ಅಮ್ಮನೆಡೆಗೆ ಓಡಿ ಬಂದೆ. ಆ ಕೂಡಲೇ ಆ ಜಾಗಬಿಟ್ಟು ಮನೆಗೆ ಹೊರಟೆವು. ಬರುವಾಗ ಯಾರೂ ಪಿಟಿಕೆನ್ನಲಿಲ್ಲ. ಯಾರಾರ ಹೃದಯರಂಗದಲ್ಲಿ ಎಂತೆಂತಹ ನಾಟಕ ಗಳು ನಡೆಯುತ್ತಿದ್ದುವೋ?...........

೪೩ನೇ ಹಾಳೆ

....ಮೊನ್ನೆ ನಮ್ಮ ಮನೆಯ ಮುಂದೆ ನಾಲ್ಕೈದು ಸಲ ಠರಾಯಿಸಿದರಲ್ಲಾ ನೀವೇ ಏನು? ಇತ್ತೀಚೆಗೆ ನಮ್ಮ ಮನೆ 'ಪುಣ್ಯಕ್ಷೇತ್ರ'ವಾಗಿಬಿಟ್ಟಿದೆ ಕೆಲವರಿಗೆ...........ಮನೆಯಲ್ಲಿ ಇದುವರೆಗೂ ಯಾವ ಜಾಡ್ಯಗಳೂ ತಲೆ ದೋರಿಲ್ಲ. ಅದಕ್ಕೇನಂತೆ! ಒಂದೇ ಸಲಕ್ಕೆ ಎರಡು ಮೂರು ಜಾಡ್ಯಗಳು ತಲೆ ದೋರಿರುವುದುಂಟು, ಅನಿರೀಕ್ಷಿತವಾಗಿ, ಅನಾವಶ್ಯಕವಾಗಿ. ಇವೊತ್ತು ಒಂದು ಕನಸು. ನಾನೀಗ ಇರುವುದು ಆ ಲೋಕದಲ್ಲಿ ತಾನೆ. ನಾನೂ ತಾವೂ ಏನೋ ಓದುತ್ತಾ ಕುಳಿತಿದ್ದೆವಂತೆ, ಅದುವೆ ನನ್ನೀಕಿರುಮನೆಯಲ್ಲಿ, ನಾನೀಗ ಕುಳಿತುಕೊಂಡು ಈ ಓಲೆ ಬರೆಯುತ್ತಿದ್ದೇನಲ್ಲಾ ಈ ಕೋಣೆಯಲ್ಲಿ. ಗೋಡೆಗೆ ಎರಡು ವರ್ಣರಂಜಿತ ಚಿತ್ರಗಳನ್ನು ಅಲಂಕರಿಸಿತ್ತು. ಒಂದು ಶಿವ ಪಾರ್ವತಿ ಯರು ಅಡವಿಯಲ್ಲಿ ಬರಿಗಾಲಿನಲ್ಲಿ ನಡೆದುಕೊಂಡು ಹೋಗುತ್ತಿದ್ದುದು. ನಾನು ಬಹಳ ಹೊತ್ತು ಅದನ್ನೇ ದಿಟ್ಟಿಸುತ್ತ ಕುಳಿತಿದ್ದೆ, ಎದುರಿಗೇ ಇದ್ದ ತಮ್ಮ ದೃಷ್ಟಿಯ ಸುಪ್ರಭೆಯನ್ನು ತೊಡೆದುಕೊಂಡಿದ್ದೆ. ಮೈತುಂಬಿ, ಮನದುಂಬಿ, ಎದೆತುಂಬಿ "ಈ ಗೌರವ ಗರಿವಿಯರ ಮುದಿಯೆತ್ತು ಎಲ್ಲಿ ಹೋಯಿತು" ಎಂದು ನಾನೇ ಪ್ರಶ್ನೆ ಹಾಕಿಕೊಂಡು "ಆ ಮುದಿಯೆತ್ತು ಎಲ್ಲಿಯೋ ಗಿಡದ ಹಸುರನ್ನು ನೋಡಿಬಿಟ್ಟಿದೆ, ಅವರ ಕೈಯಿಂದ ಕೊಸರಿಕೊಂಡು ಓಡಿಹೋಗಿ ಬಿಟ್ಟಿದೆ, 'ಸುಡುಗಾಡು ಸಿದ್ಧ'ನ ಸಹವಾಸ ಸಾಕು ಎಂದು; ಇಲ್ಲವೇ ಯಾರದೋ ಜೋಳದ ಹೊಲಕ್ಕೆ ನುಗ್ಗಿಬಿಟ್ಟಿದೆ, ಹೊಲದವನು ಹಿಡಿದುಕೊಂಡು ಹೋಗಿ ದೊಡ್ಡಿ ಕೂಡಿರಬೇಕು" ಎಂದೆ. ತಾವು ಶ್ರೀಮದ್ಗಾಂಭೀರ್ಯದಿಂದ "ಹಾಗೆಲ್ಲಾ

ಅನ್ನ ಬಾರದು 'ಶಿವ'ನಿಗೆ" ಅಂದಿರಿ. ಇನ್ನೊಂದು ಚಿತ್ರ ಅರ್ಧನಾರೀಶ್ವರನದು. ಅದನ್ನು ನೋಡಿ "ನಾನೂ ಹೀಗೇ ಆದರೆ!" ಎಂದುಕೊಳ್ಳುತ್ತಲೇ ಇರಬೇಕು, ಅದರೆಡೆಗೆ, ತೀರ ಸಮೀಪಕ್ಕೆ ಹೋದಿರಿ, ನಾನೂ ಹಿಂಬಾಲವಾದೆ. ಹತ್ತಿರಕ್ಕೆ ಹೋಗಿ ನೋಡುತ್ತೇವೆ, ಅಲ್ಲಿ ಚಿತ್ರವೇ ಇಲ್ಲ! ಬರೀ ಚೌಕಟ್ಟು, ಒಳಗೆ ಬೆಳ್ಳನೆಯ ಬಿಳಿಯ ಹಾಳೆ! ಚನ್ನಾಗಿದೆ ಕನಸು ಅಲ್ಲವೆ? ಏನೇನೋ ಕನಸು ಕಾಣುತ್ತಿದ್ದೇವೆ, ಮನೆಯಲ್ಲಿ ತಾಯಿ, ತಂದೆ ಮಾಡುತ್ತಿರುವುದನ್ನು ನೆನೆಸಿಕೊಂಡರೆ....ಕನಸು ಕನಸಾಗಿಯೇ ಉಳಿಯುವುದೇನೋ...........

ಇತಿ.

**ಶಾಂತಿ.**

೪೪

........ನಿನ್ನೆ ಇಬ್ಬರೂ ಬಯ್ಯುವುದಕ್ಕೆ ಪ್ರಾರಂಭಮಾಡಿದ್ದರು. ಆ ಹುಡುಗನನ್ನು ಒಪ್ಪಿಕೊಳ್ಳದಿದ್ದರೆ ಅವರ ಮಾನ ಹೋಗುವುದಂತೆ, ಅದಕ್ಕೆ ಯಾರ ಪ್ರಾಣವನ್ನಾದರೂ ಹಿಂಡಬೇಕಂತೆ........ಈಗ ಮನೆಯವರೆಲ್ಲರಿಗೂ ನನ್ನನ್ನು ಕಂಡರೆ ಹಾಗೆ ಹಾಗೇ. ನಮ್ಮಿರ್ವರ ನಡುವೆ ಓಡಾಡುತ್ತಿದ್ದ ಶಾರಿಗೂ ನನ್ನಮೇಲೆ ಕೋಪ. ನನ್ನ ಸಂಗಡ ಯಾರೂ ಮಾತಾಡುತ್ತಿಲ್ಲ. ತಂದೆಯವರು ಬೈಗುಳದ ಮಳೆಗರೆಯುತ್ತಿದ್ದಾಗ "ಇಷ್ಟೆಲ್ಲಾ ಅನ್ನಿಸಿಕೊಳ್ಳುವುದಕ್ಕಿಂತ, ಇಂಥ ಕೆಲಸ ಮಾಡುವುದಕ್ಕಿಂತ ಎಲ್ಲಿಯಾದರೂ ಹೊಳೆ-ಬಾವಿ ಬೀಳಬಾರದೇನೇ ಕುಲಕಂಟಕೀ" ಎಂದು ಚೀರುತ್ತ ಅಬ್ಬರಿಸುತ್ತ ನನ್ನನ್ನು ತಿನ್ನುವರಂತೆ ಹರಿದು ಬಂದರು ನನ್ನ ಹಡೆದಮ್ಮ. ತಿಂದೆ ನಾಲ್ಕೇಟು. ತಮ್ಮ ಸಲುವಾಗಿ ಏಟು ತಿಂದೆ. ಮಯ್ಯೂ ನೋಯಲಿಲ್ಲ, ಮನವೂ ನೋಯಲಿಲ್ಲ, ನಾನು ಅಳಲೂ ಇಲ್ಲ. ಈಗೀಗ ನಾನು ಎಲ್ಲ ಅಳಲನ್ನೂ ನುಂಗಿಕೊಳ್ಳುವುದನ್ನು ಕಲಿತಿದ್ದೇನೆ, ಅದರಿಂದ ಸ್ವಲ್ಪ ಕ್ಷೇಮ. ಅವರೆದುರಿಗಾದರೂ ಅಳುವುದೇಕೆ? ಏನು ಫಲ ಅತ್ತು? ಕಣ್ಣೀರು ಕೇಡು ಅಷ್ಟೆ; ನೀರು ಮುಗಿದು ರಕ್ತ ಬರುವವರೆಗೂ ಅತ್ತರೂ ಮುತ್ತು ಗದೆಲೆ ಮೂರೇ........

ಇತಿ

**"ಕುಲಕಂಟಕಿ"**

೪೫

ದೇವರು,

ಈಗಂತೂ ಬೇರೆ ವಿಷಯ ಬರೆಯುವುದಕ್ಕೂ ಆಗುವುದಿಲ್ಲ. ಮನಸ್ಸಿನಲ್ಲಿ ಉಲ್ಲಾಸವಿದ್ದರೆ ತಾನೆ ಏನಾದರೂ ಬರೆಯುವುದು? ಸಾಲದ್ದಕ್ಕೆ ಇಂದು ತಮ್ಮ ಬೈಯ್ಗುಳೂ ಪ್ರಾರಂಭವಾಗಿದೆ ಪತ್ರದಲ್ಲಿ. ತಾಯಿ, ತಂದೆ ಬಯ್ಯುತ್ತಿದ್ದರು, ಅದರ ಜೊತೆಗೆ ನೀವೂ ಒಬ್ಬರಾದಿರಿ ನನ್ನನ್ನು ಹಿಂಡಲು. ಹಡೆದವರು ಆರೀತಿಯಾಗಿ ನನ್ನನ್ನು 'ಉರಿಸು'ತ್ತಿದ್ದಾರೆ. ಅದರಿಂದಲೇ ನನ್ನ ಬಾಯಿಂದ ಅಂತಹ ಮಾತುಗಳು ಬಂದುವು. ನನ್ನನ್ನು ನನ್ನ ನಡೆ ನುಡಿಯನ್ನು ನೀವು ವಿಮರ್ಶಿಸಬೇಕಾಗಿಲ್ಲ. ಒಳ್ಳೆಯದು ಯಾವುದು ಕೆಟ್ಟದು ಯಾವುದು ಎಂಬುದು ನನಗೆ ಗೊತ್ತಿದೆ. ತಂದೆತಾಯಿಗಳು ವಿದ್ಯೆ ಕಲಿಸಿ ವಿವೇಚನಾಶಕ್ತಿಯನ್ನು ಪಡೆಯಲು ನನಗೆ ನೆರವಾಗಿದ್ದಾರೆ ಅವರಿಗೆ ನಾನು ಚಿರಋಣಿ. ನಾನು ಊಟ ಮಾಡುವಾಗ ನಿಮ್ಮನ್ನು ನೆನಸಿ ಊಟಮಾಡುವ ಪದ್ಧತಿ. ಇಂದೂ ನೆನೆದೆ. ತಾವು ಬಯ್ದುದ್ದು ನೆನಪಿಗೆ ಬಂತು. ಕಣ್ಣೀರಕೋಡಿ ಹರಿಯಿತು. ತಟ್ಟೆಯಲ್ಲಿ ಅನ್ನದಲ್ಲಿ ಬಿದ್ದವು ಆ ಕಣ್ಣೀರ ತೋರಹನಿಗಳು. ತಮ್ಮ ದೆಸೆಯಿಂದ ಉದುರಿದ ಕಣ್ಣೀರು, ಆದ್ದರಿಂದ ಅದನ್ನು ಅನ್ನದಲ್ಲಿಯೇ ಕಲಸಿಕೊಂಡು ಊಟಮಾಡಿದೆ........ದೇವರು ನಮ್ಮನ್ನು ಇಂತಹ ಇರುಕಿನಲ್ಲಿ ಏಕೆ ಸಿಕ್ಕಿಸಿದನೋ! ನಾನು ದೇವರಾಗಿದ್ದರೆ ಹೀಗೆ ಮಾಡುತ್ತಿರಲಿಲ್ಲ ಯಾರಿಗೆ ಏನು ಬೇಕೋ ಅದನ್ನು ಕೊಟ್ಟು ಎಲ್ಲರನ್ನೂ ಸೌಖ್ಯವಾಗಿಡುತ್ತಿದ್ದೆ........

೪೭

........ತಂದೆಯವರು ಇಂದು ಎಷ್ಟು ಚೆನ್ನಾಗಿ ಮಾತಾಡಿಸಿದರು ನನ್ನ! "ಶಿವನೇ ಇವರು ಯಾವಾಗಲೂ ಹೀಗೆಯೇ ಇರುವಂತೆ ಮಾಡಪ್ಪ" ಎಂದು ಬೇಡಿಕೊಂಡೆ. ನನ್ನ ಕಷ್ಟ ಬಯಲಾಯಿತು, ಗೋಳು ಗಿರಿಶನಿಗೆ ಮುಟ್ಟಿತು ಎಂದುಕೊಂಡೆ. ಆದರೆ! ತಂದೆಯ ಮಾತು ಬೇವಿನಹಣ್ಣು. ಆ ಹುಡುಗನನ್ನು "ಮದುವೆ" ಯಾಗಬೇಕಂತೆ. ಅವರ ಮಾತಿಗೆ ಬೆಲೆಕೊಟ್ಟು ಮದುವೆಯಾದೆನೆಂದೇ ಇಟ್ಟುಕೊಳ್ಳೋಣ. ಅದು ಅವನಿಗೆ ಮೊದಲನೆಯ ಮದುವೆಯೇ ಸರಿ. ನನಗೆ? ಆ ಹುಡುಗನಿಗಾದರೂ ನಿಜವಾದ ಸುಖವಿರುತ್ತದೆಯೆ? ಚೆನ್ನಿಗ 'ವಿದ್ಯಾವಂತ' ಹಣವಂತ. ಅವನ ಜೀವನವೂ ಹಾಳಾಗ

ಬೇಕೆ ಪಾಪಿ ನನ್ನಿಂದ? ಆ ಹುಡುಗನಿಗೂ 'ಇಷ್ಟವಿದೆ' ಯಂತೆ. ಪಾಪ! ಅವನಿಗೇನುಗೊತ್ತು ಈ ಹೂವು ಅರ್ಪಿತವಾಗಿದೆಯೆಂಬುದು! ತಂದೆಯವರು ತಮ್ಮ ತೊಂದರೆಗಳನ್ನೆಲ್ಲಾ ವಿವರಿಸಿ ಹೇಳಿದರು. ಅಷ್ಟೊಂದು ಸಾವಧಾನವಾಗಿ ಶಾಂತ ಮನಸ್ಸಿನಿಂದ ಹೇಳಿದ್ದನ್ನು ನಾನು ನೋಡಿದ್ದು ಇದೇ ಮೊದಲು. ನನ್ನ ನಿಮ್ಮ ವಿವಾಹ ಆಗುವುದರಿಂದ ಮುಂದೊದಗಬಹುದಾದ ಅನಾಹುತಗಳನ್ನೆಲ್ಲಾ 'ಚಿತ್ರಿಸಿ' ಹೇಳಿದರು, ನಮಗೇನೂ ಆ ವಿಷಯ ಗೊತ್ತೇ ಇಲ್ಲವೇನೋ ಎನ್ನುವ ಹಾಗೆ! ನಾನೂ ಬುಡದಿಂದ ತುದಿಯವರೆಗೆ ಸಮಾಧಾನದಿಂದ ಕೇಳಿದೆ. ಅವರ ಸ್ಥಿತಿಯನ್ನು ನೋಡಿ ನನಗೂ ಮರುಕ ಉಂಟಾಯಿತು. ಮಿಡುಕಿದೆ, ಪಶ್ಚಾತ್ತಾಪಪಟ್ಟೆ, ನಾನು ನಿಜವಾಗಿಯೂ ಅವಿಧೇಯಳು ಎಂದುಕೊಂಡೆ. ಆದರೇನು ಮಾಡುವುದು? ಕೈಮಿಂಚಿಹೋಗಿದೆ. ಇಟ್ಟ ಹೆಜ್ಜೆಯನ್ನು ಹಿಂದಕ್ಕೆ ಕೀಳಲು ಎಲ್ಲರಿಗೂ ಶಕ್ತಿಯಿರುತ್ತದೆಯೆ? ಮತ್ತೆ ಅವರಷ್ಟೇ ಸೌಜನ್ಯದಿಂದ "ನನಗೆ ಇಷ್ಟವಿಲ್ಲ, ನನಗೆ ಮದುವೆಯೇ ಬೇಡ" ಎಂದು ಹೇಳಿಬಿಟ್ಟೆ. "ಏನಂತ ಹುಟ್ಟಿದೆಯೇ ನಮ್ಮನೇಲೀ ಕುಲಕ್ಕೆ ಮೃತ್ಯು ಕೊಡಲಿ ಕಾವು ಅನ್ನೋಹಾಗೆ" ಎನ್ನುತ್ತ ನಮ್ಮನ್ನು ಈದಹುಲಿಯಂತೆ ಬಂದು ತಲೆಯ ಮೇಲೆ ಎರಡು ಕೊಟ್ಟರು. ಸದ್ಯ ಅಷ್ಟಕ್ಕೆ ಏಟುಹಾಕುವುದನ್ನು ನಿಲ್ಲಿಸಿ 'ಸಹಸ್ರನಾಮ' ಷುರುವು ಮಾಡಿದರು. ನಾನೇನು ಅಳಲಿಲ್ಲ. ಎಲ್ಲಾ ಒಳ್ಳೇದಕ್ಕೇ ಎಂದುಕೊಂಡು ಒಳಗೆಹೋಗಿ ಮಲಗಿಕೊಂಡೆ. ಈಗ ನಮ್ಮ ಮನೆಯಲ್ಲಿ ನನ್ನನ್ನು ಯಾರೂ ಮಾತನಾಡಿಸುವುದಿಲ್ಲ, ಮುಟ್ಟುವುದಿಲ್ಲ. ನನ್ನ ಪಾಲಿಗೆ ಮಾತನಾಡಿಸುವುದು ಎಂದರೆ ತಾಯಿತಂದೆಗಳ ಬೈಗಳು ಎಂದರ್ಥ; ಮುಟ್ಟುವುದು ಎಂದರೆ ತಾಯಿಯ ಏಟು........

೪೯

........ನನ್ನಿಂದಲೇ ಅಲ್ಲವೆ ತಮಗೆ ಇಷ್ಟೆಲ್ಲಾ ತೊಂದರೆ? ನಾನು ಸ್ವಾರ್ಥಿಯಾದ್ದರಿಂದ ಅಲ್ಲವೆ? ಇಷ್ಟು ಹೊತ್ತಿಗೆ ಯಾವ ಪುಣ್ಯವತಿಯು ತಮಗೆ ಪುಷ್ಪಮಾಲೆಯನ್ನು ಅರ್ಪಿಸುತ್ತಿದ್ದಳೋ, ತನ್ನ ಮುಖಕಮಲವನ್ನು ತನ್ನ ಆ ಬಾಹುಲತೆಯೆಂಬ ಪುಷ್ಪಹಾರದ ಕುಚ್ಚಿನಲ್ಲಿ ಪವಣಿಸಿ. ಮೊದಲನೆಯದಾಗಿ ನಾನು ಪಾಪಿ. ಆದ್ದರಿಂದ ನನಗೆ ಸಂಬಂಧಪಟ್ಟವರೆಲ್ಲಾ ಆ ಪಾಪದ ಗೋಳಿನ ಉಸುಬಿನಲ್ಲಿ ಸಿಕ್ಕಿಬಿಡುತ್ತಾರೆ........ಇನ್ನೂ ನಿಮಗೆ ಆ ಸೌಂದರ್ಯದ ಬಣ್ಣನೆಯ

ಹಸಿವು ಆರಿಲ್ಲವೆಂದು ಕಾಣುತ್ತದೆ. ಅದು ನನ್ನ ದೃಷ್ಟಿಯಲ್ಲಿ ಹುಡುಗಾಟ. ನಾವು ಆ ಮೆಟ್ಟಲನ್ನು ಮೆಟ್ಟಿ ಮೇಲೇರಬೇಕು, ಏರಿದ್ದೇವೆ. ಈಗ ಬಂದು ನೋಡಿ ಎಷ್ಟು ಬಡವಾಗಿದ್ದೇನೋ. ನೀವು ಬಹಳ ಮೆಚ್ಚಿಕೊಳ್ಳುತ್ತಿದ್ದೀರಲ್ಲಾ ಈ ಬಳೆಗಳು ಈಗ ಮೊಣಕೈಗೆ ಬರುತ್ತಿವೆ, ಅಷ್ಟು ಬಡವಾಗಿದ್ದೇನೆ........ ಇನ್ನೇನು ಬರೆಯುವುದಕ್ಕೂ ಬೇಜಾರು. ಇನ್ನೂ ಎಷ್ಟು ದಿವಸವಪ್ಪಾ ಈ ಬವಣೆ! ಈಗ ಆ ಅಡಿಗೆಕೆಲಸ ಮಾಡುವ ಗೌರಿಯೇ ನನಗೆ ತಾಯಿ, ತಂದೆ, ಅಕ್ಕ, ತಂಗಿ, ಎಲ್ಲಾ........ಬರೆಯಲಾರೆ, ಬರೆದದ್ದು ನೋಡಲಾರೆ........

ಇತಿ ದಾಸಿ

೫೧

ಇಂದು ತಂದೆಯವರಿಗೆ ಬಾಯಿಬಿಟ್ಟು ಹೇಳಿಬಿಟ್ಟೆ ನಿಮ್ಮ ಹೆಸರನ್ನು, ನಾಚಿಕೆ ಮರ್ಯಾದೆ ಎಲ್ಲವನ್ನೂ ತೊರೆದು. ಆಮೇಲೆ ನನಗೆ ಹೇಗೆ ಹೇಗೋ ಆಯಿತು, ಅಯ್ಯೋ ಹೀಗೆ ವರ್ತಿಸಿಬಿಟ್ಟೆನಲ್ಲಾ ಬೇರೆ ರೀತಿಯಲ್ಲಿ ಸೂಕ್ಷ್ಮವಾಗಿ ತಿಳಿಸಬಹುದಾಗಿತ್ತು ಎಂದು. ಅವರಿಗೆ ಆ ಮೊದಲು ತಮ್ಮ ವಿಷಯ ಗೊತ್ತಿದ್ದಿಲ್ಲವೆಂತಲ್ಲ. ನನ್ನ ಬಾಯಿಂದಲೇ ತಮ್ಮ ಸಂಗತಿಯನ್ನೆಲ್ಲಾ ಅರಿತುಕೊಳ್ಳಬೇಕೆಂಬ ಆಶೆ ಅವರಿಗೆ. ಅಮ್ಮ ಮತ್ತೆ ಹೇಳಿದರು ಕೆರೆಯನ್ನೋ ಬಾವಿಯನ್ನೋ ಮರೆಬೀಳು ಎಂದು. ತಂದೆಯವರು ಎಷ್ಟಾದರೂ ಸುಧಾರಕರಲ್ಲವೆ? ಮೊದ ಮೊದಲು ಸಂಪ್ರದಾಯ, ಸಮಾಜ, ಮಾನ ಮರ್ಯಾದೆ ಅವರ ಕಣ್ಣಮುಂದೆ ಕುಣಿಯುತ್ತಿರಬೇಕೆಂದು ಕಾಣುತ್ತದೆ. ಅವರ ಮನಸ್ಸಿನಲ್ಲಿಯೇ ಸಂಪ್ರದಾಯ ಮತ್ತು ಸುಧಾರಣೆಗಳ ತುಮುಲಯುದ್ಧ ನಡೆದಿರಬೇಕು. ತಮ್ಮ....ಹೇಳಿದ ಕೂಡಲೆ "ಆಗಲಿ" ಎನ್ನಲಿಲ್ಲ. ಮೊದಲು ಸ್ವಲ್ಪ ಸಿಡುಕಿದರು; ಆಮೇಲೆ ಸ್ವಲ್ಪ ಹೊತ್ತು ಆಲೋಚನೆ ಮಾಡಿದವರಂತೆ ಮಾಡಿ ಒಪ್ಪಿಕೊಂಡುಬಿಟ್ಟರು. ಒಂದೇ ಸಾರಿಗೆ ಒಪ್ಪಿಕೊಂಡುಬಿಟ್ಟರೆ ಹೇಗೆ? ಅವರ ಮಾನಕ್ಕೆ ಭಂಗ ಬರುವುದಿಲ್ಲವೆ? ಆದರೂ ನನಗೇನೋ ಬೆದರಿಕೆ. ಇತ್ತೀಚಿಗೆ ಅವರ ವರ್ತನೆ ಅತಿ ವಿಲಕ್ಷಣ. ಕಾರಣ ಹೊಳೆಯದು. ಹೋಗಲಿ ಬಿಡಿ. ಹೇಗೂ ನಮಗೆ ಅನುಕೂಲವಾಗಿದ್ದಾರಲ್ಲ. ಅವರ ವರ್ತನೆ ಕಟ್ಟಿಕೊಂಡು ನಮಗೇನು ಆಗಬೇಕಾಗಿದೆ. ನಮ್ಮದಾರಿ ನಮಗೆ...........

ಇತಿ

ಶಾಂತಾ

**೫೫ ನೇ ಗರಿ**

........ಅದೇಕೆ ಪತ್ರದಲ್ಲೆಲ್ಲಾ ನಿರಾಸೆಯೇ ಹಾಸು ಹೊಕ್ಕಾಗಿದೆ?....... ನಿಮಗೆ ನಾನಲ್ಲದೆ ಇನ್ನಾರು 'ಶಾಂತಿ' ಯ 'ತನಿ' ಎರೆಯಬೇಕು? ನನಗೇನೋ ನಿನ್ನೆ ಮತ್ತು ಇವತ್ತು ಮನಸ್ಸಿಗೆ ಸ್ವಲ್ಪ ಶಾಂತಿಯಾಗಿದೆ. ಈ ನಿರಾಶೆ, ಈ ಭಯ ಅಕಾರಣ ತಮ್ಮನ್ನು ಭಾಧಿಸುತ್ತಿರುವುದೇಕೋ ನಾಬೇರೆ ಕಾಣೆ. ವಸಂತಋತು ಸಮಾಪಿಸುತ್ತಾ ಇದೆ ನೋಡಿ ಶಿವ! ಇಂದು ಬೆಳಗಿನ ಮುಂದೆ ಒಂದು ಕನಸು. ಅದನ್ನು ನನ್ನ ಬಣಗು ಮಾತಿನಲ್ಲಿ ಬಣ್ಣಿಸುವೆ.

ಪಡುಗಡೆಯ ಬೆಟ್ಟ ಹೊಂಗದಿರನನ್ನು ತನ್ನ ತಲೆಯ ಮೇಲೆ ಹೊತ್ತುಕೊಂಡು ಮೆರೆಯುತ್ತಿತ್ತು. ಕಮಲಿನಿ ಕೊರಗುತ್ತಿದ್ದಳು. ಸಾಧ್ಯವಾದರೆ ಆ ಕಮಲ ಸಖನನ್ನು ಹಿಡಿದುಕೊಂಡು ಬಂದು ಕಮಲಿನಿಗೆ ಕೊಡೋಣವೆಂದೋ, ಸುಮ್ಮನೆ ಅವನನ್ನು ನೋಡಿಕೊಂಡು ಬರೋಣವೆಂದೋ ಅವನೆಡೆಗೆ ಹೊರಟೆವು. ನಡೆದೆವು, ನಡೆದವು, ನಡೆದೇ ನಡೆದೆವು. ಯಾರು ನಡೆದಿದ್ದು ಗೊತ್ತೆ? ನೀವು ಮತ್ತು............ನನ್ನ ಕಾಲು ಸೋತುಬಿಟ್ಟವು ಅಲ್ಲಿಯೇ ದಾರಿಯ ಮಗ್ಗುಲಲ್ಲಿ ಪ್ರಕೃತಿದೇವಿ ಹಾಸಿದ್ದ ಹಸಿರ-ಗುಂಬಳಿಯ ಮೇಲೆ ಕುಳಿತೆವು. ಭಾನುದೇವನಿಗೆ ಅದೇಕೋ ಮುನಿಸುಬಂದಂತೆ ತೋರುತ್ತದೆ. ತಪ್ಪಿಸಿಕೊಳ್ಳಲು ಒಂದು ಉಪಾಯ ಹೂಡಿದ. ನಮ್ಮ ಕಣ್ಮನಗಳನ್ನು ಸೆಳೆದು ನಮ್ಮನ್ನು ಮುಗ್ಧರನ್ನಾಗಿ ಮಾಡುವಂಥ ಮಾಯಾಜಾಲವನ್ನು ಬೀಸಿದ ಪಡುಗಡೆಯ ಕೆಮ್ಮುಗಿಲಿನಲ್ಲಿ. ಒಂದು ಬಣ್ಣವೇ? ಒಂದು ಆಕಾರವೇ? ಎಷ್ಟು ಬಣ್ಣವೆಂದು ಹೇಳಲಿ? ಎಂತಹ ದಿವ್ಯಪುಷ್ಪಗಳು!! ಬಣ್ಣಬಣ್ಣದ ಮೋಡಗಳು, ಅವಕ್ಕೆಲ್ಲಾ ಮಿಂಚಿನ ಅಂಚು. ಹೊಮ್ಮಿಂಚಿನ ಹೊನಲು! ಅಲ್ಲಿ ನಟ್ಟ ದೃಷ್ಟಿಯನ್ನು ಕೀಳುವುದಕ್ಕೆ ಆಗಲಿಲ್ಲ. ಅತ್ತಕಡೆಯೇ ನೋಡುತ್ತ ಕುಳಿತೆವು ಮಾಯಾವಿ ದಿನಕರನ ಮಹೇಂದ್ರಜಾಲದಲ್ಲಿ ಸಿಲ್ಕಿ. ಅವನನ್ನು ಬೆನ್ನಟ್ಟುವುದು ಮರೆತೇಹೋಯಿತು. ಸ್ವಲ್ಪ ಹೊತ್ತಾದ ಮೇಲೆ ಆ ಬಣ್ಣದ ಸಂತೆ ಹರಿಯಲಾರಂಭಿಸಿತು. ಮಾಯಾಜಾಲದ ಬಿಗುವು ಸ್ವಲ್ಪ ಕಡಮೆಯಾಯಿತು. ಮೆಲ್ಲಗೆ ಸೂರ್ಯನ ಕಡೆಗೆ ಕಣ್ಣು ಹೊರಳಿದವು; ಕಳ್ಳ ಮಾಯವಾಗಿದ್ದ. ಮಾಯದಪುಷ್ಪಗಳು ಮೊಗ್ಗಿ ಕಂದಿದವು. ಬಣ್ಣದ ಸಂತೆ ಹರಿಯಿತು. ಮಿಂಚೂ ಇಲ್ಲ ಮೆರಗೂ ಇಲ್ಲ. ಬಳಿಕ ನಾವಿಬ್ಬರೂ ಹೊರಟೆವು

ನಮ್ಮ ಗೂಡು ಸೇರಲು ಅಷ್ಟರಲ್ಲಿ ನಮಗೆ ಸಮಾಧಾನಕ್ಕೋ ಎನ್ನುವಂತೆ ಚಂದಿರದೇವನು ಬೆಳುಮುಗಿಲ ಮರೆಯಲ್ಲಿ ಹೋಗುತ್ತ ಹೊರಗೆ ಬರುತ್ತ ತನ್ನ ನಲ್ಲೆಯೊಡನೆ 'ಹುಡುಕಪ್ಪ' ನನ್ನು ಆಡುತ್ತ ಬಂದ ನಮ್ಮನ್ನು ಎದುರು ಗೊಳ್ಳಲು. ಮುಗಿಲು ಕಡಲಿನಲ್ಲಿ ನೀರ್ವಣ್ಣಗಳೊಡನೆ ಚಲ್ಲಾಟವಾಡುತ್ತ ಅವನೂ ಹೊರಟ—ಪಡುವಲ ನಾಡಿಗೆ ಮರುಳಾಗಿ ಪಡುವಲ ದಿಕ್ಕಿಗೆ ಮುಖ ನಾಗಿ. ಸೂರ್ಯನಿದ್ದಿದ್ದರೆ ನನ್ನನ್ನು ಎಲ್ಲಿ ನೋಡುತ್ತಿದ್ದಿರಿ? ಎಂದು ಚಂದ್ರ ವೇದಾಂತ ಓದಿದಂತಿತ್ತು................

ಇತಿ

ನಿಮ್ಮ ನಲ್ಲೆ ಶಾಂತಿ

**ಗರಿ ೫೭**

ಪತಿದೇವ, (ಹೌದು, ನೀವು ನನ್ನ ಪತಿ)

................ಏನೋ ಸಂಕಟ ಹೊಟ್ಟೆಯಲ್ಲಿ. ಹಾಸಿಗೆಯಿಂದ ಏಳು ವುದಕ್ಕೂ ಶಕ್ತಿಯಿಲ್ಲ. ತಲೆ ತಿರುಗುತ್ತೆ. ಜೊತೆಗೆ ಮನೆಯವರ ಸಹಸ್ರ ನಾಮಗಳು. ಸಾಲದ್ದಕ್ಕೆ ಯಾರ್ಯಾರೋ ಏನೇನೋ ಕತೆ ಕಟ್ಟಿದ್ದಾರಂತೆ. ನಮ್ಮ ಅಡಿಗೆಯವಳು ಇದನ್ನೆಲ್ಲಾ ನನಗೆ ಉಸಿರುತ್ತಾಳೆ. ಆ ಕಥೆ ಕಟ್ಟು ವವರು ನಮ್ಮ ಸ್ಥಾನದಲ್ಲಿ ಇದ್ದಿದ್ದರೆ "ಹಾಗೇ" ಮಾಡುತ್ತಿದ್ದರೆಂದು ಕಾಣು ತ್ತದೆ. "ಕುಲವನ್ನು ನಾಲಗೆ ಹೇಳುತ್ತದೆ". ಮೊಳಗಲಿ ಮೊಳಗಲಿ ಮರಳು ವಾದ್ಯಗಳು. ಅವರನ್ನು ನೋಡಿ ನಾವು ನಗಬೇಕು ಅಷ್ಟೆ; ಅಳಬೇಕಾಗಿಲ್ಲ. ಆ ಕಥೆಗಳನ್ನು ನಿರೂಪಿಸಿ ಕಾಗದ ಮಸಿ ಕಾಲ ಹಾಳುಮಾಡುವುದೇಕೆ? ನಿಮ್ಮ ಮನಸ್ಸನ್ನು ನೋಯಿಸುವುದೇಕೆ? ಎಲ್ಲರ ಕಣ್ಣಿಗೂ ನಾನು ಕೆಟ್ಟವ ಳಂತೆಯೇ ಕಾಣುತ್ತೇನೆ, ಈ ಪಾಪಿ! ನನ್ನ ಗೋಳನ್ನು ಕೇಳುವುದಕ್ಕೆ ನೀವು ಹುಟ್ಟಿರುವಂತಿದೆ........ ಬರೆಯಲಾರೆ ಶಕ್ತಿಯಿಲ್ಲ, ಕಣ್ಣು ಕಾಣುವುದಿಲ್ಲ, ಮಂಜಾಗುತ್ತಿದೆ........ಥೂ! ಜೀವನ ದುಃಖಮಯ. ಸಾಯಬೇಕು........

ನಿನ್ನೆಯಿಂದ ಹೊರಗಡೆಯೇ ಊಟಮಾಡಬೇಕಾಗಿದೆ. ನಿನ್ನೆ ಅದೇನೋ "ಔಷಧಿ" ಎಂದು ತಂದುಕೊಟ್ಟರು; ಕುಡಿದೆ ವಿಷಕುಡಿಯುವ ಳಂತೆ. ಅಬಬ, ಈಗಲೂ ಮೈ ಜುಮ್ಮೆನ್ನುತ್ತೆ. ಕಕ್ಕಟ್ಟ ಕಹಿ! ವಿಷವೂ ಸಿಹಿ, ಅದಕ್ಕೆ ಹೋಲಿಸಿದರೆ........

೫೮

ಬೆದರಬೇಡಿ ಸ್ವಾಮಿ, ನಾನು ಸಾಯುವವಳಲ್ಲ. ಈ ಪ್ರಪಂಚವನ್ನು ಕಂಡು ಅಷ್ಟು ರೋಷಬಂತು. ರೋಸಿಬಿಟ್ಟು ಆ ಮಾತು ಆಡಿದೆ. ನಮಗೆ ಯಾರೂ ಸಹಾನುಭೂತಿ ತೋರಿಸುವುದೇ ಇಲ್ಲ. ಮನಬಂದಂತೆ ಆಡಿಕೊಳ್ಳು ತ್ತಾರೆ ಇಲ್ಲದಸಲ್ಲದ ಕಥೆ ಕಟ್ಟುತ್ತಾರೆ. ನಿಮ್ಮನ್ನು ಕರೆದುಕೊಂಡು ಈ ಜನ ಗಳನ್ನು ತೊರೆದು 'ನೆಲ ಮುಗಿಲ ನಪ್ಪುವೆಡೆಗೆ' ಹೋಗೋಣ ಎನ್ನಿಸು ತ್ತದೆ. ಆಡಿಕೊಳ್ಳುವವರೂ ಮನುಷ್ಯರು, ವಿದ್ಯಾವಂತರು, ಸಮಾಜದ "ಆಧಾರಸ್ತಂಭಗಳು" ಕಳ್ಳಗತೆ ಹೆಣೆಯುತ್ತಾರೆ........ನಾವು ಬೇಕಾದಹಾಗೆ ಓದಬಹುದಂತೆ, ಬೇರೆಬೇರೆ ಜಾತಿಯ ಬೇರೆಬೇರೆ ಜನಾಂಗದ ಮಹಿಳೆಯ ರೊಂದಿಗೆ ಬೆರೆಯಬಹುದಂತೆ; ಅದರ ಫಲವಾಗಿ, ನಮ್ಮ ಧ್ಯೇಯ ಆದರ್ಶ ಗಳನ್ನು ಮಾರ್ಪಡಿಸಿಕೊಳ್ಳಲು ಅವಕಾಶಬೇಡವೆ? ಆ ವಿಷಯವನ್ನು ಕುರಿತು ಆಲೋಚನೆಮಾಡಿದರೂ ತಪ್ಪೆ? ಮದುವೆಯ ಬಗ್ಗೆ ಹಿರಿಯರು ನಮ್ಮ ಸಲಹೆ ಸೂಚನೆಗಳನ್ನು ಕೇಳಿದರೆ ತಪ್ಪೇನು? ಅವರ ಮಾನ ಮಾಯವಾಗಿಬಿಡುವುದೆ? ಸಿಟ್ಟುಬಂದರೆ ನಾನೇನು ಸಾಮಾನ್ಯಳಲ್ಲ. ಹಿಂದೂ ಮಹಿಳೆ ತನ್ನ ಜೀವಮಾನದಲ್ಲಿ ಒಂದೇ ಒಂದುಸಾರಿ ಮಾಡಬಹುದಾದ "ತಪ್ಪೆಂ" ದರೆ 'ವರ' ನ ಬಗ್ಗೆ ತನ್ನ ಸಮ್ಮತಿಯನ್ನೋ ಅಸಮ್ಮತಿಯನ್ನೋ ಸೂಚಿಸುವುದು. ಆ 'ತಪ್ಪಿ' ನ ಫಲವಾಗಿ ಕಷ್ಟವನ್ನು ಅನುಭವಿಸಬೇಕಾಗಿ ಬಂದರೆ ನಾನೇ ಮಾಡಿದ ತಪ್ಪೆಂದು ಸಮಾಧಾನಪಟ್ಟುಕೊಳ್ಳುವುದಕ್ಕೂ ಅವಕಾಶವಿಲ್ಲವೆ? ಹೋಗಲಿ ಬಿಡಿ. ನಮ್ಮ ತಾಯಿತಂದೆಗಳಂತೆಯೇ ಉಳಿ ದವರೂ ಇರಲಾರರು. ಈ ವಾದವನ್ನೆಲ್ಲಾ ತೆಗೆದರೆ 'ಅನುಕೂಲಶಾಸ್ತ್ರ" ಎಂದು 'ಜನ' ಕರೆದಾರು.

ನಾನು ಹೀಗೆಲ್ಲಾ ಎಲ್ಲರೂ ಸಾಯುವಂತೆ ಸಾಯುವುದಿಲ್ಲ........ನಾನು ಹಗಲಿರುಳೂ ದೇವರನ್ನು ಬೇಡುತ್ತಿರುವ ವರವೆಂದರೆ ಒಂದೇ ಒಂದು. ನಾನು ನಿಮಗಿಂತ ಮುಂದೆ ಸಾಯುವುದು ಅಥವಾ ನಿಮ್ಮೊಡನೆ ಸಾಯುವುದು. ನಾನು ಸಾಯುವಾಗ ನೀವು ನನ್ನ ಹತ್ತಿರ, ತೀರ ಹತ್ತಿರ ಇರಬೇಕು. ನನ್ನ ತಲೆ ತಮ್ಮ ತೊಡೆ ತೊಟ್ಟಿಲ ಮೇಲಿರಬೇಕು. ತಮ್ಮ ಆಶೀರ್ವಾದ ಹಸ್ತ ನನ್ನ ತಲೆಯ ಮೇಲಿರಬೇಕು. ನಾನು ಮಾಡಿದ (ಮಾಡಿದ್ದರೆ) ತಪ್ಪು

ತೊಡರುಗಳಿಗಾಗಿ ನಾನು ತಮ್ಮಲ್ಲಿ ಕ್ಷಮಾಯಾಚನೆ ಮಾಡುತ್ತಿರಬೇಕು. ಕಣ್ಣಿನ ಭಾಷೆಯಲ್ಲಿ. ನೀವು ಕ್ಷಮಿಸಿದ್ದೇನೆಂದು ಹೇಳಬೇಕು. ಆಗಲೇ ನಾನು ಹರುಷದಿಂದ ಶಾಂತಿಯಿಂದ ನಿಮ್ಮನ್ನು ನೋಡುನೋಡುತ್ತ ನಗುತ್ತ ಪ್ರಾಣ ಬಿಡುವುದು। ಇಬ್ಬರೂ ಒಂದೇ ಗಳಿಗೆಯಲ್ಲಿ ಸಾಯುವುದು ಅಸಂಭವ, ಹಾಗೇ ನಾದರೂ ಆದರೆ ನಮ್ಮ 'ಪುಷ್ಪ'ವು ಆ ಪರಮಪುರುಷನ ಅಡಿದಾವರೆಗಳಲ್ಲಿ ಸೇರಿ ಇನ್ನುಳಿದ ಅಲರುಗಳ ಕಾಂತಿಯನ್ನು ಮಸುಳಿಸುವುದು.

ಅಯ್ಯೋ, ಇದೇನೀ ಹುಚ್ಚಾಟ! ಆ ಮೇಲೆ ಹೇಗಾದರೂ ಸಾಯೋಣ ವಂತೆ. ಈಗೇನು ಹೇಳುತ್ತೀರಿ? ನನ್ನನ್ನು ಈ ಸೆರೆಮನೆಯಿಂದ ಎಂದು ಪಾರು ಮಾಡುವಿರಿ? ಇದೇ ಮನೆಯೇ ಸ್ವರ್ಗಕ್ಕೆ ಸಮನಾದ ಕಾಲವೂ ಇತ್ತು. ಆದರೆ ಆ ಸ್ವರ್ಗ ಇಂದು ನನ್ನ ಪಾಲಿಗೆ ನರಕವಾಗಿದೆ. ತಾಯಿಯ ನೆಳಲೂ ಹೊಂಗೆಯ ನೆಳಲೂ ಒಂದೇ ಅಂತೆ, ನನ್ನ ಪಾಲಿಗೆ ತಾಯಿಯ ನೆಳಲು ಬೆಂಕಿಯ ಉರಿಯ ನೆಳಲು. ತಂದೆಯವರೋ?........ಅವರಿಗೆ ಹೆಸರಿಟ್ಟರೆ ಇನ್ನೂ ಹೆಚ್ಚಿಗೆ ಬಳಲಬೇಕಾದೀತು. ಇವೊತ್ತಿಗೆ ಸಾಕು.

ಇತಿ

ನಿಮ್ಮನಿಯಳು ಶಾಂತಾ.

೬೪ ನೇ ಗರಿ

........ಇತ್ತೀಚೆಗಂತೂ ಬಹಳ ನಿಶ್ಶಕ್ತಿ. ಸರಿಯಾದ ಉಪಚಾರವಿಲ್ಲ. ಅನ್ನ ರುಚಿಸದು. ಮನಸ್ಸನ್ನೂ ಕರುಳನ್ನೂ ಬಿಗಿಹಿಡಿದು ಅನ್ನವನ್ನು ತಿಂದರೆ ಅನ್ನ ನನ್ನನ್ನೇ ತಿಂದುಬಿಡುತ್ತದೆ. ಈಗ ಎರಡುಮೂರು ದಿವಸಗಳಿಂದ ಬೇರೆ ಔಷಧಿಯನ್ನು ತಂದುಕೊಡುತ್ತಿದಾರೆ. ಅಷ್ಟಾದರೂ ಮಾಡುತ್ತಿದ್ದಾರಲ್ಲ! ದೇವರು ಅವರಿಗೆ ಒಳ್ಳೆಯದು ಮಾಡಲಿ. ಆದರೂ ಉಪಚಾರಕ್ಕೆ ಯಾರೂ ಇಲ್ಲ........ನೀವೀಗ ಹತ್ತಿರ ಇದ್ದಿದ್ದರೆ! ಆ ಸೌಭಾಗ್ಯವೆಲ್ಲಿ ನನಗೆ...........

೬೫

........ಮಾತಾಡಲೂ ಶಕ್ತಿಯಿಲ್ಲ. ಬರೆಯಹೋದರೆ ಕೈನಡುಗುತ್ತವೆ. ಎನ್ನೊಡೆಯ, ಮೊನ್ನೆ ಕನ್ನಡಿಯಲ್ಲಿ ನನ್ನ ಮುಖ ನೋಡಿಕೊಂಡೆ, ನನ್ನ ಗುರುತು ನನಗೇ ಸಿಕ್ಕಲಿಲ್ಲ. ಹಿಂದೆ ಒಂದು ಪತ್ರದಲ್ಲಿ—ಒಂದು ಹುಡುಗಿ ಬೇಕು, ಆ ಹುಡುಗಿ ಹೀಗಿರಬೇಕು ಹಾಗಿರಬೇಕು ಎಂದು ವರ್ಣಿಸಿದ್ದಿರಲ್ಲಾ

ಆ ಹುಡುಗಿ ಖಂಡಿತವಾಗಿಯೂ ಅಲ್ಲ ನಾನು. ನನಗೆ ಒಂದೇ ಒಂದು ಆಸೆ, ಅದು ಈಡೇರಿದರೆ ಆಯಿತು ನಿಮ್ಮನ್ನು ನೋಡಬೇಕು........ಅದೃಷ್ಟವಿಲ್ಲ.....

೬೬

ಶಿವ,

ಈಗ ನೀವು ನನ್ನನ್ನು ನೋಡಿದರೆ ಗುರುತಿಸುವುದಿರಲಿ, ನೋಡಿದೊಡನೆ ಯೋಜನದೂರ ಓಡುವಿರಿ. ನನ್ನ ಕಣ್ಣುಗಳನ್ನು ಅದೇತಕ್ಕೋ ಹೋಲಿಸುತ್ತಿದ್ದಿರಿ ಅವೀಗ ಹಸಿರುಮುರಿಯಾಗಿವೆ. ಉಗುರುಗಳೂ ಗಿಣಿಯ ವೈಬಣ್ಣ ಈ 'ಅರಗಿಣಿ' ಗೆ. ದೇವದೇವ, ಕನಸು ಕನಸಾಗಿಯೇ ಉಳಿಯುವುದೇನೋ? ಛೆ! ನಾನೇಕೆ ಮತ್ತೆ ಕೊರಗುತ್ತಿದ್ದೇನೆ? ತಂದೆಯವರೂ ಮತ್ತೆ ಮೊನ್ನೆ ಹೇಳಿದರಲ್ಲ, ಗುಣವಾದೊಡನೆಯೇ 'ಮಾಡಿಬಿಡೋಣ' ವೆಂದು. ಆ ಯಮನಿಗೆಷ್ಟು ಎದೆ ನಮ್ಮಿಬ್ಬರ ನಡುವೆ ಬರುವುದಕ್ಕೆ? ವಿಧಿ! ಅವನನ್ನೇ ಹಿಡಿತಂದು ಅವನ ಹಣೆಬರಹವನ್ನೇ ತೊಡೆದುಹಾಕೋಣ! ವಿಧಿಗೆ ವಿಧಿಯಾಗೋಣ!........ತಾಳಿ, ಭಯಬೇಡ. ಖಂಡಿತ ಗುಣವಾಗುತ್ತೆ............ ಆ—ಅ—ವ್ಯ—ತ—ಗಳಿಗೆ ಯಾವಾಗ ಬಂದೀತೋ! ತಾವು "ಮೋಕ್ಷೇಚ" ಎನ್ನುವುದನ್ನೂ ಸೇರಿಸಿ ಪ್ರತಿಜ್ಞೆ ಮಾಡಬೇಕು! ............ ನನ್ನ ಮನೆಯಲ್ಲಿ ಒಂದುಗಿಣಿ ಸಾಕಿದ್ದೇನೆ. ಎಷ್ಟು ಚೆನ್ನಾಗಿದೆ! ಅದನ್ನು ಕಂಡರೆ ನನಗೆ ಬಹಳ ಇಷ್ಟ........

ಇತಿ

**ನಿಮ್ಮ ರಾಣಿ ಶಾಂತಿ**

೬೭

ನನ್ನ ಸ್ವಾಮಿ,

ಹಿಂದಿನ ಪತ್ರದಲ್ಲಿ, ಏನೇನೋ ಬರೆದಿದ್ದೆ, ಏನೇನೋ ಆಶೆ! ಆಕಾಂಕ್ಷೆ! ಅದೆಲ್ಲಾ ಈಗ ಸಾಧ್ಯವಿಲ್ಲ ಶಿವೂ. ನಾನು ನಿನ್ನ ಕೈಗೆ ಸಿಗಲಾರೆ. ನಿನ್ನನ್ನು ನೋಡಬೇಕು. ಅದೇ ಕೊನೆಯ ದರ್ಶನವೆಂದು ಕಾಣುತ್ತೆ. ದೇವರು ದಯಾಮಯನಲ್ಲ........

ಇತಿ

**ನಿಮ್ಮ ಶಾಂತಿ.**

೬೮

**ಶಿವ, ದೇವ,**

........ಅತಿ ಕಷ್ಟದಿಂದ ಬರೆಯುತ್ತಿದ್ದೇನೆ. ಬರೀ ದರ್ಶನವಾಯಿತು ಅಷ್ಟೆ. ಮಾತಾಡುವುದಕ್ಕೆ ಬಾಯಿಬರಲಿಲ್ಲ. ಮಾತುಗಳಿಗೂ ಆ ಶಕ್ತಿ ಬೇಕಲ್ಲ! ಶಕ್ತಿಯನ್ನೆಲ್ಲ ಬೆರಳಿಗೆ ತಂದು ಅಕ್ಷರಗಳನ್ನು ಮೂಡಿಸುತ್ತಿದ್ದೇನೆ. ಅದೇನು? ತಂದೆಯೇ ಕರೆತಂದರು! ಶಿವ, ದಯಾಮಯ, ನಾನೇನೋ ಸಾಯುತ್ತೇನೆ, ಪುಣ್ಯವತಿ. ಹೌದು ಪುಣ್ಯವತಿಯೇ. ನಿನ್ನಗತಿ! ಬರೆಯಲಾರೆ ಕೈನಡಗುತ್ತಿದೆ. ಕಣ್ಣೀರು........

**ಶಾಂತಿ.**

**೬೯ನೇ ಗರಿ.**

ಸ್ವಾಮಿ,

ಕೊ ಕೊ ನೆಯ ಕಾಗದ. ಹೋ ಹೋ ಗಿ ಬರುವೆ. ನಮಸ್ಕಾರಗಳು. ಬರುವೆ. ಮತ್ತೆ ಬರುವೆ.

ಇತಿ,

ಜನುಮ ಜನುಮಕೂ ನಿಮ್ಮವಳು

**ಶಾಂತಿ, ನಿಮ್ಮ ಶಾಂತಿ.**

*   *   *   *

ಮುಂದಿನವು ಬರಿಯ ಹಾಳೆಗಳು. ಅಂತಹವು ಒಂದನ್ನೋ ಎರಡನ್ನೋ ತಿರುವಿ ಹಾಕಿದೆ. ಅಷ್ಟು ಹೊತ್ತಿಗೆ ಮುಂಗಾರುಕಾಲದಲ್ಲಿ ಜಗತ್ತಿನ ಜೀವಿಗಳೆಲ್ಲಾ ಸೆಕೆ, ಬಿಸಿಲು, ದಾಹಗಳ ತಾಪದಿಂದ ತೊಳಲಿ ಬಳಲಿ ಬೆಂಡಾದ ಮೇಲೆ ಬೈಗಿನ ಹೊತ್ತು ಆಕಾಶದಲ್ಲೆಲ್ಲಾ ಕಾರ್ಮೋಡ ಕವಿದು ಗುಡುಗು ಗಡುಗಿ ಮಿಂಚು ಹೊಳೆದು ತೋರ ತೋರ ತೋರ ಹನಿಗಳು ಫಳಫಳ ಉದುರುತ್ತವೆ; ಆ ಹನಿಗಳೇ ಉದುರಿದವು ಹತ್ತಾರು, ಆ ಬರಿಯ ಬಿಳಿಯ ಹಾಳೆಗಳ ಮೇಲೆ. ನನ್ನ ತಲೆಯನ್ನೂ ಎರಡು ಹನಿಗಳು ಕಟಿದವು. ಹಿಂತಿರುಗಿ ನೋಡಿದೆ. ಶಿವದೇವರು ನನ್ನ ಹಿಂದೆಯೇ ನಿಂತಿದ್ದರು ಆಗತಾನೆ ಬಂದು.

**ಇಣಿಕಿ ನೋಡಿದ ಮಹಾಪರಾಧಕ್ಕಾಗಿ ಶಿವದೇವರನ್ನು ಬೇಡಿಕೊಂಡೆ ಕ್ಷಮೆಯ ನೀಡಿರೆಂದು.**

# ಹುಡುಗಾಟ

ಆಚೆಯ ಕೇರಿಯ ಗಂಗೆಯ ಮನೆಯವರೂ ನಮ್ಮ ಮನೆಯವರೂ ಒಂದೇ ಕುಟುಂಬದವರಂತಿದ್ದರು ಆಗ.

ಒಂದು ಸಂಗತಿ ಚೆನ್ನಾಗಿ ಜ್ಞಾಪಕವಿದೆ: ಆಗ ನಾನಿನ್ನು ಚಿಕ್ಕಹುಡುಗ. ವಯಸ್ಸು ಇಷ್ಟೆಂದು ಗೊತ್ತಿಲ್ಲ. ಹಾಲು ಹಲ್ಲು ಇನ್ನೂ ಬಿದ್ದಿರಲಿಲ್ಲ; ಗಟ್ಟಿ ಹಲ್ಲು ಹುಟ್ಟಿರಲಿಲ್ಲ. ಅಂದು ಗಂಗೆಯ ಮೊದಲನೆಯ ಹುಟ್ಟಿದ ಹಬ್ಬವೇ. ನಮ್ಮಮ್ಮ ಅವರಮ್ಮ ಮಾತಿನಲ್ಲಿ ಮುಳುಗಿದ್ದಾಗ ನಾನು ಗಂಗೆಯನ್ನು ಎತ್ತಿಕೊಂಡು ಆಡಿಸಿದೆ. ನಮ್ಮಮ್ಮ ನನ್ನನ್ನು ಮುದ್ದಿಸುವಂತೆ ನಾನು ಗಂಗೆಯನ್ನು ಮುದ್ದಾಡಿಬಿಟ್ಟೆನಂತೆ. ಗಂಗೆಯ ತಾಯಿ ಇದನ್ನು ಕಂಡು ಹಿರಿ ಹಿರಿ ಹಿಗ್ಗಿ "ಯಾಕಪ್ಪಾ ಬಹಳ ಮಾತಾಡಿಸ್ತೀ" ಎಂದರು. ನಮ್ಮಮ್ಮ "ಅದೊಂದು! ನಮ್ಮ ತಾಯಿ ಮನೇಲಿ ಮಕ್ಕಳು ಆಡಲೀ ಅಂತ ಅಷ್ಟು ಗೊಂಬೆಗಳನ್ನು ತಂದುಹಾಕಿದರೆ ಯಾವುದೋ ಒಂದು ಹೆಣ್ಣು ಗೊಂಬೆ ತೋರಿಸಿ ತನಗೆ ಅದೇ ಆಗಬೇಕು ಅಂತ ಹಠ ಹಿಡಿದಿತ್ತು; ಬೇರೆ ಹುಡುಗರಿಗೂ ಅದೇ ಬೇಕು! ನನಗೆ ಸಿಟ್ಟುಬಂದು ಅದು ಯಾರಿಗೂ ಬೇಡ ಎಂದು ಆ ಗೊಂಬೇನ ಮುರಿದು ಪುಡಿಮಾಡಿದ್ದೆ. ಮತ್ತೆ ಜೀವದ ಗೊಂಬೆ ಸಿಕ್ಕಿಬಿಟ್ಟಿದೆ" ಎನ್ನುತ್ತ ತಾಯ ಕರುಳು ಬೆರಕಿದ ಸಿಟ್ಟಿನಿಂದ ನನ್ನ ಕಡೆ ನೋಡಿದರು. ಗಂಗೆಯ ತಾಯಿ ನಮ್ಮಿಬ್ಬರನ್ನೂ (ನಾನು, ಗಂಗೆ) ನೆಟ್ಟದೃಷ್ಟಿಯಿಂದ ಸ್ವಲ್ಪಹೊತ್ತು ನೋಡಿ "ಒಳ್ಳೆ ವರ, ಆಕೆಯನ್ನೇ ಅವನಿಗೆ ಹೆಸರು ಕರೆದರೆ (ಮದುವೆಮಾಡಲು ಸಂಕಲ್ಪ) ಆಯಿತು."

"ಯಾಕಾಗಬಾರದು ಹಣೆಯಲ್ಲಿ ಬರೆದಿದ್ದರೆ?" ಲೋಕಾರೂಢಿಯಾಗಿ ಎಂದರು ನಮ್ಮಮ್ಮ.

ನನಗೇನೋ ಪುಡಿಯಾಗಿ ಹುಡಿಯೊಂದಿಗೆ ಸೇರಿದ ಆ ಗೊಂಬೆಯೇ ಗಂಗೆಯಾಗಿರಬೇಕು ಅನಿಸಿತು. ನಾನು ದಿನಾಲು ಅವರ ಮನೆಗೆ ಹೋಗಿ ಗಂಗೆಯನ್ನು ಆಡಿಸಿ ತೊಟ್ಟಿಲಲ್ಲಿಟ್ಟು ತೂಗಿ ಮಲಗಿಸಿ ಬರುತ್ತಿದ್ದೆ. ಗಂಗೆಯ

ಮನೆಯವರು ನಮಗೆ ದೂರದ ಸಂಬಂಧ. ಆದುದರಿಂದ ನಾನು ಅವರ ಮನೆಗೆ ಹೋಗಿಬರುವುದನ್ನು ಯಾರೂ ಆಕ್ಷೇಪಿಸುವ ಹಾಗಿರಲಿಲ್ಲ. ಅವರ ಮನೆಯಲ್ಲೂ ಮಕ್ಕಳನ್ನು ಆಡಿಸುವುದಕ್ಕೆ ಯಾರೂ ಇರಲಿಲ್ಲ. ನನಗೂ ತಮ್ಮನಾಗಲಿ ತಂಗಿಯಾಗಲಿ ಇರಲಿಲ್ಲ. ಗಂಗೆಯನ್ನು ಆಡಿಸುವ ಗೀಳಿನಲ್ಲಿ ಒಂದೊಂದು ದಿನ ಪಾಠಶಾಲೆಗೆ ಹೋಗುವುದನ್ನೂ ಮರೆತು ಉಪಾಧ್ಯಾಯರಿಂದ ಏಟು ತಿಂದಿದ್ದೇನೆ.

ಗಂಗೆ ಬೆಳೆದಳು. ನಾನೂ ಬೆಳೆದೆ. ಆಕೆಗೆ ಐದು ವರ್ಷ, ನನಗೆ ಒಂಭತ್ತು ನಡೆಯುತ್ತಿತ್ತು. ಇಬ್ಬರೂ ಜೊತೆಗೇ ಬೇರೆಯ ಮನೆಯ ಮಕ್ಕಳೊಂದಿಗೆ ಆಟವಾಡುತ್ತಿದ್ದೆವು. ಗಂಗೆಯ ಮನೆಯಲ್ಲಿ ಒಂದು ಮದುವೆ ನಡೆಯಿತು. ಆ ಮದುವೆಯ ಹುಗ್ಗಿಯನ್ನೂ ಎಂಡು ತಾಂಬೂಲವನ್ನು ಕದ್ದು ತಂದು ಇಬ್ಬರೂ ಸವಿದು ಹೊರಹೊರಟೆವು ಆಟವಾಡುವುದಕ್ಕೆ. ಮೊಗ್ಗಲು ಮನೆ ಗಂಗೆ, ದೊಡ್ಡಮನೆ ಚೆನ್ನಿ, ಕಡೇಮನೆ ಗೌರಿ, ಸಣ್ಣತಿಮ್ಮೇಳ ಗುಣುಕ, ಮಳ್ಳ, ಮಹಾದೇವಿ, ರೇವಕ್ಕ, ಪಾರ ಎಲ್ಲರೂ ಕೂಡಿದೆವು. ಯಾವ ಆಟವನ್ನು ಆಡಬೇಕೆಂಬುದು ನಮ್ಮ ಸಮಿತಿಯಲ್ಲಿ ತೀರ್ಮಾನವಾಗಬೇಕಾಯಿತು.

"ಕಣ್ಣುಮುಚ್ಚಾಲೆ ಆಡೋಣ" ಎಂದಳು ಚೆನ್ನಿ.

ತಿಮ್ಮ—"ಊಹೂಂ ದೇವರು ಮಾಡೋಣ."

ಮಹಾದೇವಿ ಮೂತಿ ತಿರುವಿದಳು ಮೂಗು ಮುರಿದಳು "ಅದೇನು ಚಂದವೋ! ಮಣ್ಣಿನ ದೇವರುಮಾಡಿ ಹುಡುಗರೇ ಹೊತ್ತುಕೊಂಡು ಕುಣಿಯುವುದು. ನಾವ್ನಿಂತುಕೊಂಡು ನೋಡಬೇಕೇನೋ 'ಹೆಂಗಸರು'

"ಕೊಕ್ಕ?" ಎಂದ ಗಂಗ, ಬಾಯಿ, ಕಣ್ಣು ತೆರೆದುಕೊಂಡೇ ಇದ್ದ ಉತ್ತರಕ್ಕಾಗಿ ಕಾದು. ರೇವಕ್ಕ ನಾಚಿಗೆ ಸಸಿಯಂತೆ ಮುರುಕಮಾಡುತ್ತ "ಕೊಕ್ಕ ಆಡೋದಕ್ಕೆ ನಾ ಬರೋದಿಲ್ಲ ಗಂಡರಗೂಳಿ ಹಾಗೆ ಕೊಕ್ಕನ್ನ ಆಡಬೇಕಂತೆ."

ಪಾರಿ—"ನಾನೊಂದು ಹೇಳ್ತೀನೆ ಕೇಳ್ರಿ! ಒಂದಿಷ್ಟು ಮಣ್ಣುತಂದು ಗೊಂಬೆಮಾಡಿ ಅವಕ್ಕೆ ಬಣ್ಣ ಬಳಿದು ಬಾಸಿಂಗಸೂಡಿ ಮದುವೆ ಮಾಡೋಣ ಆ?" ಒಪ್ಪಿಸುವ ದನಿಯಲ್ಲಿ ಕೇಳಿದಳು ಕೊರಳುತಿರುವುತ್ತ.

ಗಂಗ ಆಗಲೇ ಸ್ವಲ್ಪ ದೊಡ್ಡ ಹುಡುಗ. "ಗೊಂಬೆಗೇನು ಜೀವ ಇರುತ್ತದೆಯೇ? ಸಾಸಿವೆ ಇಕ್ಕೋದಕ್ಕೆ, ಹೆಸರು ಹೇಳಿಸೋದಕ್ಕೆ, ಜಗಳವಾಡಿಸಿ ಒಂದುಗೂಡಿಸೋಕೆ ಸರಿಯಾಗೋದಿಲ್ಲ" ಎಂದು ಅರಿಚಿಕೊಂಡ.

ಮಹಾದೇವಿ—"ಮದುವೆಯೇನೋ ಮಾಡೋಣ. ಗೊಂಬೆ ಮದುವೆ ಏನು ಚೆನ್ನ" ಎನ್ನುತ್ತ ಗಂಗೆಯ ಕಡೆ ತನ್ನ ಕಣ್ಣು ಹೊರಳಿಸಿದಳು.

ನಾನು ಅಷ್ಟು ಸುಮ್ಮನಿದ್ದವನು ತಟಕ್ಕನೆ "ಗಂಗೆಯ ಮದುವೆ?" ಎಂದೆ. ಆಗಲೇ ಗಂಗೆ "ಹೋಗ್ರೀ ನಾನೊಲ್ಲೆ" ಎನ್ನುತ್ತ ತಲೆತಗ್ಗಿಸಿಯೇ ಬಿಟ್ಟಳು. ಯಾರೂ ಬೇಕು, ಬೇಡ, ಆಗು ಬಿಡು ಎನ್ನುವುದರೊಳಗೇ ಈಸೋಗು! ಮಹಾದೇವಿ "ಗಂಗೆ ಮೊದಲಗಿತ್ತಿ, ತೀರ್ಥ ಮದಲಿಂಗ" ಎಂದುಬಿಟ್ಟಳು. ಗಂಗೆಗೆ ಇನ್ನೂ ರೇಗಿತು, ಅವಳ ಮನಸ್ಸಿನಲ್ಲಿದ್ದುದು ಹೊರಬಿದ್ದುದರಿಂದಲೋ ಏನೋ. ಕೊರಳು ಕೊಂಕಿಸುತ್ತ "ನಾನು ಹೋಗ್ತೀನ್ರಪ್ಪ ನೀವೇ ಆಡಿಕೊಳ್ರಿ" ಎನ್ನುತ್ತ ಎದ್ದು ಮನೆಗೆ ಹೊರಡಲನುವಾದಳು. ನಾನೂ ಎದ್ದೆ. ಮೊಗ್ಗುಲಲ್ಲಿದ್ದ ಗಂಗ ನನ್ನ ಕೈಹಿಡಿದು ಜಗ್ಗಿ ಕುಳ್ಳಿರಿಸಿ ಕೂತ್ಕೊಳ್ಳೋ ಕೂತುಕೊ! ಹುಡುಗನಿಗೆಂತಾ ನಾಚಿಕೆ?" ಎಂದ ಒಳ್ಳೇ ಜ್ಞಾನಿಯಂತೆ. ನನಗೇನು ನಾಚಿಕೆಯಾಗಲಿಲ್ಲ. ಗಂಗೆ ಹೊರಡಲು ಎದ್ದಿದ್ದಳು ನಾನೂ ಎದ್ದುಬಿಟ್ಟೆ ಅಷ್ಟೆ. ಕೊನೆಗೆ ಸುಮ್ಮನೆ ಕುಳಿತೆ ಮದುವೇ ಆಟ ಆಡೋಣವೆಂದು.

ಈ ಕಡೆ ರೇವಕ್ಕ ಆಗಲೇ ಹತ್ತುಹೆಜ್ಜೆ ಹೋಗಿದ್ದ ಗಂಗೆಯ ಹತ್ತಿರ ಓಡಿ "ಅಯ್ಯೋ ಹುಚ್ಚುಗಂಗೆ, ಇದೇನು ನಿಜವಾದ ಮದುವೆಯೇನೆ? ಆಡುವುದಕ್ಕಾಗಿ ಒಂದು ಆಟ" ಹೊರಟಿದ್ದ ಅವಳನ್ನು ಎಳೆದುಕೊಂಡು ಬಂದು ಕುಳ್ಳಿರಿಸಿದಳು.

ನಮ್ಮ ಆಟದಲ್ಲಿ ಭಾಗವಹಿಸುವುದಕ್ಕೆ ಇನ್ನೂ ಹತ್ತಾರು ಹುಡುಗ ಹುಡುಗಿಯರು ನೆರೆದರು. ಕಾರ್ಯಸ್ಥ, ಕಾರ್ಯಸ್ಥೆ, ಹೆಣ್ಣಿನ ಕಡೆಯವರು ಗಂಡಿನ ಕಡೆಯವರು, ಬೀಗ ಬೀಗತಿಯರು. ಈ ಪಾತ್ರಗಳನ್ನು ಸರಿಯಾಗಿ ಹಂಚಿಕೊಂಡರು. ಜೋಳದ ಗರಿಯ ಪೀಪಿಯೇ ಓಲಗ, ಮಣ್ಣಿನ ಮಣಿಗಳು, ತೆಂಗಿನಗರಿ, ಜೋಳದ ಗರಿಗಳು ಹೆಣ್ಣನ್ನು ಅಲಂಕರಿಸಿದುವು ಒಡವೆಗಳಾಗಿ. 'ಮುತ್ತೈದೆ' ಯರು ಮರಳಿನ ಉಡಿಯಕ್ಕಿಯನ್ನು ತುಂಬಿ

ಕೊಂಡರು. ಅವರೆಯ ಎಲೆ, ಕಲ್ಲುಹರಳು 'ತಾಂಬೂಲ.' 'ಮುತ್ತೈದೆ' ಯರು ಒಂದನ್ನೂ ಬಿಡದೆ ಎಲ್ಲಾ 'ಶಾಸ್ತ್ರ'ವನ್ನೂ ಮಾಡಿದರು. ಗಂಗೆಯೋ! ನಿಜವಾದ ಮೊದಲಗಿತ್ತಿಗಿಂತಲೂ ಒಂದು ಕೈ ಮೇಲಾಗಿಯೇ ವರ್ತಿಸಿದಳು. 'ಹಸೆ'ಯ ಮೇಲೆ ಕೂತಾಗ ಮೂಗಿನ ತುದಿ ನೆಲವನ್ನು ಮುಟ್ಟುತ್ತಿತ್ತು. 'ಗಂಡಿಗೆ' ಸೇಸೆಯಿಕ್ಕುವಾಗ ಗಂಗೆ ಮಾಡಿದ ಮುರುಕ ಎಷ್ಟು! ಉಕ್ಕಿಬರುತ್ತಿದ್ದ ಹರುಷವನ್ನು ಎಷ್ಟೊಂದು ಜಾಣ್ಮೆಯಿಂದ ಹತ್ತಿಕ್ಕುತ್ತಿದ್ದಳು ಚಂದ್ರಿಕೆಯಂತಹ ಆ ನಸುನಗುವಿನಿಂದ! ಆವಳು ನಾಚ್ಚಿ ದರೆ ಎಷ್ಟು ಚಲುವು, ಏನು ಚಂದ! ನನ್ನನ್ನು ಕುಡಿನೋಟದಿಂದ, ಕುಣಿಕೆ ನೋಟದಿಂದ ಕದ್ದುಕದ್ದು ನೋಡುತ್ತಿದ್ದುದನ್ನು ಈಗ ನೆನಸಿಕೊಂಡರೆ ಹೇಗಾಗು ತ್ತದೆ ಅಂತೀರಿ! ಹೆಸರು ಹೇಳಿಸುವಾಗಲಂತೂ 'ಮುತ್ತೈದೆ'ಯರ ಗೋಳು ಹೇಳತೀರದು. ಮದುವೆಗಿಂತ ಮೊದಲು 'ತೀರ್ಥಣ್ಣ' ಎಂದು ಬಾಯಿ ತುಂಬ ಕರೆಯುತ್ತಿದ್ದವಳಿಂದ ಅಂದು ಅದೇ ಹೆಸರನ್ನು ಹೇಳಿಸಲು ಆಚೆ ಗುಡ್ಡ ತೆಗೆದು ಈಚೆಗೆ ಇಟ್ಟಂತೆಯೇ ಆಯಿತು.

ಹಳ್ಳಿಯ ಮದುವೆಗಳಲ್ಲಿ ವಧೂವರರು ಜಗಳವಾಡಿದಂತೆ ನಟಿಸಬೇಕು. ಊರು ಮುಖಂಡರು ಬಂದು ಪಂಚಾಯ್ತಿಮಾಡಿ ಗಂಡಹೆಂಡಿರನ್ನು ಒಂದು ಮಾಡಬೇಕು. ಇದೂ ಒಂದು ಶಾಸ್ತ್ರ. ನಮ್ಮ 'ಮದುವೆ'ಯಲ್ಲಂತೂ 'ನನ್ನ ಗಂಗೆ' "ನಮ್ಮ ನಮ್ಮ ಜಗಳ ನೀವೇನು ತೀರಿಸಬೇಕು" ಎಂದುಬಿಟ್ಟು 'ಬುದ್ಧಿವಂತ'ರ (ಊರ ಮುಖಂಡರೇ ಬುದ್ಧಿವಂತರು) ಮಾನ ಕಳೆದು ಬಿಟ್ಟಳು. ಮದುವೆಯಲ್ಲಿ 'ಶಾಸ್ತ್ರ'ದ ಜೊತೆಗೆ ಊಟವೂ ಆಗಬೇಕು ತಾನೆ. ಊಟಕ್ಕೆ ಎಲೆ ಹಾಕಿದಂತೆ ಮಾಡಿದರು, ಹರಳೆಲೆ ಔಡಲೆಲೆಗಳನ್ನು. ಎಲೆಯ ಮುಂದೆ ಎಲ್ಲರೂ ಕುಳಿತರು, ಗಂಗೆಯೂ ನಾನೂ ಊಟಕ್ಕೆ ಬಡಿಸಿದೆವು, ಎಲ್ಲರೂ ಉಂಡಂತೆ ಮಾಡಿದರು. ಅಂತೂ ಮದುವೆ ಮುಗಿಯಿತು. ಸಾಧಾ ರಣವಾಗಿ ಮದುವೆಗಳಲ್ಲಿ ವ್ಯಾಜ್ಯ, ಜಗಳ, ದೊಂಬಿ ಇವು ತಪ್ಪಿದ್ದಲ್ಲ, ಇಲ್ಲಿ ಆ ರಗಳೆಯೇ ಇರಲಿಲ್ಲ. ವಧುವಿಗೆ ಆ ನೆಗ ಬೇಕು, ಈ ನೆಗ ಬೇಕು. ಈ ಸೀರೆ ಚೆನ್ನಾಗಿಲ್ಲ ಬೇರೆ ಸೀರೆ ತರಬೇಕು ಎನ್ನುವ ಶಬ್ದವೇ ಇರಲಿಲ್ಲ 'ವಧು'ವಿನ 'ತಂದೆ'ಯಾಗಲಿ 'ತಾಯಿ'ಯಾಗಲಿ ಕಣ್ಣೀರಿನ ಕೋಡಿ ಯನ್ನೂ ಹರಸಲಿಲ್ಲ. 'ಕಾರ್ಯ'ಗಳೆಲ್ಲಾ ಸುಗಮವಾಗಿ ಸಾಂಗವಾಗಿ ನೆರ

ವೇರಿದುವು. 'ಮದುವೆ' ಮುಗಿದ ಮೇಲೆಯೂ ಗಂಗೆ ನನ್ನನ್ನು ಮಾತಾಡಿಸುವುದಕ್ಕೆ, ಎಂದಿನಂತೆ ನನ್ನ ಬಳಿ ಬರುವುದಕ್ಕೆ ಬಹಳ ಸಂಕೋಚಪಟ್ಟುಕೊಂಡಳು. ಆಟ ಮುಗಿಯಿತು; ಗಂಗೆಯ ಮುರುಕಾಟ ಮುಗಿಯಲಿಲ್ಲ ಇದನ್ನು ನೋಡಿ ನನಗೇ ಆಶ್ಚರ್ಯವಾಯಿತು.

ನಮ್ಮ ಮನೆಯವರು ಇನ್ನೂ ಗಂಗೆಯ ಮನೆಯಲ್ಲೇ ಇದ್ದರು. ಆದುದರಿಂದ ಗಂಗೆಯ ಮನೆಯಕಡೆಗೇ ಹೊರಟೆ. ಪಾಪ, ಗಂಗೆ ಮನಸ್ಸಿಲ್ಲದ ಮನಸ್ಸಿನಿಂದ ನನ್ನನ್ನು ಹಿಂಬಾಲಿಸಿದಳು. ಅಷ್ಟುದಿನವೂ ಜೊತೆಗೇ ಕೈ ಹಿಡಿದುಕೊಂಡು ಹರಟೆಯ ಹಾಲ್ಜೇನು ಸವಿಸುತ್ತ ಬರುತ್ತಿದ್ದವಳು ಅಂದು ಹಿಂಬಾಲಿಸಿದಳು ಮಾತ್ರ. ನಿಜವಾದ ಮದುವೆಯ ಮನೆಗೆ ಬಂದೆವು. ಆಗಲೇ ನಮ್ಮ 'ಮದುವೆ'ಯ ಸುದ್ದಿ ಮದುವೆಯ ಮನೆಯನ್ನು ಮುಟ್ಟಿತ್ತು. 'ನಮ್ಮತ್ತೆ' (ಗಂಗೆಯ ತಾಯಿ ನಾವೆಯಿಂದ ನಮ್ಮತ್ತೆಯೂ ಆಗಬೇಕು) "ತಾಯೀ ಮುತ್ತೈದೇರ, ಆರತಿತರ್‍ರೀ ಮದಲಿಂಗ ಮದಲಿಂಗಿತ್ತಿರಿಗೇ" ಎಂದರು. ಗಂಗೆಗೆ ಮುಗಿಲೇ ನೈಮೇಲೆ ಕವುಚಿ ಬಿದ್ದಂತೆ ಆಯಿತೆಂದು ಕಾಣುತ್ತದೆ. ಹೊಮ್ಮಿಗದಂತೆ ತಾಯಿಯ ಬಳಿಗೆ ಚಿಮ್ಮಿ ಆಕೆಯ ಸೆರಿಹಿಡಿದುನಿಂತು ಮುಖಭಾವದಿಂದಲೇ ಕ್ಷಮಾಪಣೆ ಕೇಳುತ್ತ ಹೊರಹೊಮ್ಮಿ ಬರುತ್ತಿದ್ದ ಕಣ್ಣೀರನ್ನು ಒತ್ತಿಹಿಡಿದು "ನಾನಲ್ಲ ಅಮ್ಮ; ರೇವಕ್ಕ, ಮಾದೇವಿ ಗಂಗ, ಪಾರಿ ಇವರೆಲ್ಲಾ ನನ್ನನ್ನು ಒಪ್ಪಿಸಿ ಹೀಗೆ ಮಾಡಿದರು. ಈ ಸಾರಿ ಅಂತಾ ಆಟ ಯಾವಾಗಲೂ ಆಡುವುದಿಲ್ಲ" ಎಂದು ಹೇಳಿ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ತಾಯಿ ಅವಳ ಬೆನ್ನು ತಲೆ ಸವರುತ್ತ "ಏನಾಯ್ತವ್ವ ಆಟ ಆಡಿದರೆ? ಅದಕ್ಕೇಕೆ ಅಳ್ತೀ ಸುಮ್ನಿರೆ ಹುಚ್ಚಿ" ಎಂದು ಸುಮ್ಮನೆಮಾಡಿದರು. ಗಂಗೆ ಕೆಲಸದಲ್ಲಿದ್ದ ತನ್ನ ತಾಯನ್ನು ಅಷ್ಟಕ್ಕೆ ಬಿಟ್ಟು ಇನ್ನು ನಡುಮನೆಯೊಳಗೆ ಕಾಲಿಡಬೇಕು, ಅಷ್ಟರಲ್ಲೇ ಯಾರೋ "ಮೊದಲಂಗಿತ್ತೀ ಮೊದಲಿಂಗಿತ್ತಿ ಗಂಗಾದೇವೀ, ಬಾರೇ ನಮ್ಮನೀಗೇ, ಊಟಕ್ಕೆ ಹೋಗೋಣ" ಎಂದು ಕೂಗಿದರು. ಆಗಂತೂ ಆಕೆಗೆ ಪ್ರಾಣವೇ ಹಾರಿಹೋಯಿತೇನೊ. ಓಡೋಡಿ ಹೋಗಿ ಒಂದು ಕತ್ತಲ ಕೋಣೆಯಲ್ಲಿ ಅವಿತುಕೊಂಡುಬಿಟ್ಟಳು. ನಾನು ಮುಖ ಜೋತು ಬಿಟ್ಟುಕೊಂಡು ಮನೆಯ ಕಡೆ ಬಂದೆ.

ಅಂದು ದೀವಳಿಗೆ ಹಬ್ಬ. ನಮ್ಮ ಹಳ್ಳಿಯವರಿಗೆ ದೀವಳಿಗೆಯೇ 'ಆನೆ ಯಂತಹ' ದೊಡ್ಡ ಹಬ್ಬ. ಬೇಸಾಯದ ಮುಟ್ಟುಗಳೆಲ್ಲಾ ಗೆದ್ದಲಿಂದ ಬಿಡು ಗಡೆಯಾಗುವುದು. ಅಂದೇ. ತುಕ್ಕು ಹಿಡಿದು ಅಥವಾ ಗೊರಲೆಬಡಿದ ಮುಟ್ಟುಗಳು ಶುಚಿಯಾಗಿ ಥಳಥಳ ಹೊಳೆಯುತ್ತ ಅದಕ್ಕಾಗಿಯೇ ಸಿದ್ಧ ವಾಗಿರುವ ಜಗಲಿಯನ್ನೋ ಹಜಾರವನ್ನೋ ಚನ್ನಾಗಿ ಗುಡಿಸಿ ಸುಣ್ಣ ಬಣ್ಣ ಬಳಿದ ಕೊಟ್ಟಿಗೆಯನ್ನೋ ಅಲಂಕರಿಸುವುವು. ಆ ಮುಟ್ಟುಗಳು ಸಹ ಕೆಮ್ಮಣ್ಣು ಸುಣ್ಣದ ಕಟ್ಟುಗಳನ್ನು ತೊಡೆದುಕೊಳ್ಳುವುವು. ಅಂದು ದನಕರು ಗಳೆಲ್ಲಾ ಮಿಂದು ಮೈಯೆಲ್ಲಾ ಬಣ್ಣಬಣ್ಣದ ಪಟ್ಟೆಗಳನ್ನು ಹಾಕಿಕೊಳ್ಳುವುವು. ಹುಡಗಹುಡುಗಿಯರಂತೂ ಜವಳಿ ಅಂಗಡಿಗೆ ದಾಳಿಯಿಟ್ಟು, ಚಿಪ್ಪಿಗರಿಗೆ ಕಾಟಹಾಕಿ, ಹೊಸಹೊಸ ಅಂಗಿಲಂಗಗಳನ್ನು ಹೊಲಿಸಿಕೊಂಡು ಬಂದು ತಮ್ಮ ಶಕ್ತಿಮೀರಿ ಅಲಂಕರಿಸಿಕೊಳ್ಳುವರು. ಆ ಹಬ್ಬಕ್ಕೆ 'ದೀವಳಿಗೆ' ಎಂದು ಕರೆಯುವುದಕ್ಕಿಂತ 'ಹಟ್ಟಿಹಬ್ಬ' ಎಂದು ಕರೆಯುವುದೇ ಮೇಲು, ಹಾಗೆಯೇ ಕರೆಯುವವಾಡಿಕೆ. ಏಕೆಂದರೆ ಆ ಹಬ್ಬದಲ್ಲಿ ಹೆಚ್ಚು ಆದರ ಗೌರವ ದನ ಕರುಗಳಿಗೆ ಮತ್ತು ಬೇಸಾಯದ ಮುಟ್ಟುಗಳಿಗೆ. ಗಂಗೆಯನ್ನು ನೆನಸಿ ಕೊಂಡ ಕೂಡಲೇ ಆ ದೃಶ್ಯಗಳೆಲ್ಲಾ ಕಣ್ಣಮುಂದೆ ಸುಳಿಯುತ್ತವೆ. ಆ ಹಟ್ಟಿ ಹಬ್ಬದಲ್ಲಿ ಗಂಗೆ ಆಗಲೇ ದಟ್ಟಿ ಉಡುತ್ತಿದ್ದಳು.

ಸಂಜೆಯಲ್ಲಿ ಹುಡುಗಿಯರು ಬಣ್ಣಬಣ್ಣದ ಉಡಿಗೆತೊಡಿಗೆಗಳಿಂದ ಅಲಂಕೃತರಾಗಿ ಎಂಟುಕಾಲಿನ ದೀವಿಗೆಗಳನ್ನು ಹಿಡಿದುಕೊಂಡು ಗುಂಪುಗಂಪಾಗಿ ಮನೆಮನೆಗೆ ಹೋಗಿ "ಅಂಡರಿಕೇ ಪಂಡರಿಕೇ ಎಂಟುಕಾಲ್ದೀವಿಗೇ ಎಣ್ಣೇ ಬೀಡೇ ದ್ಯಾಮವ್ವಾ ದ್ಯಾಮವ್ವ" ಎಂದು ಮುಂತಾಗಿ ಹಾಡು ಹಾಡುತ್ತ ದೀವಿಗೆ ಗಳಿಗೆ ಎಣ್ಣೆಬಿಡಿಸಿಕೊಂಡು ಮೊಂಡಾಟಮಾಡಿ ಕಾಸು 'ವಸೂಲು' ಮಾಡಿ ಕೊಂಡು ಮುಂದಿನ ಮನೆಗೆ ಹೋಗುವರು. ಇದೇ ರೀತಿ ಊರನ್ನೆಲ್ಲಾ ತಿರುಗಿ ಕೊಂಡು ಬರುವರು. ಹುಡುಗಿಯರಿಗೆ ದೀಪದಾಟವಾದರೆ ಹುಡುಗರಿಗೆ ಪಂಜಿ ನಾಟ. ಪಂಜನ್ನು ಉರಿಸುತ್ತ ಆ ಉರಿನಲ್ಲಿ ಪಟಾಕಿ, ದಡಾಕಿ, ಮತಾಪು, ಬೆಳ್ಳುಳ್ಳಿ ಬುಡ್ಡು, ಹೂವಿನ ಕಡ್ಡಿ, ಮಿಂಚಿನ ಬಳ್ಳಿ, ಇವನ್ನು ಸುಡುತ್ತ ಮನ ಬಂದಂತೆ ಕುಣಿಯುವರು. ಪಂಜು ಬೀಸುತ್ತ ಬಾಯಿಗೆ ಬಂದಂತೆ ಹಾಡುವರು, ಕೇಕೆ ಹಾಕುವರು. ಅಂದು ಕೆಟ್ಟ ಮಾತುಗಳಿಗೆ, ಬಯ್ಗುಳಗಳಿಗೆ ರಹದಾರಿ

ಉಂಟು. 'ಅಂಡ್ರಿಕೆ' ಆಡುತ್ತಿರುವ ಹುಡುಗಿಯರ ಹಿಂಡಿಗೆ ದಾಳಿಯಿಟ್ಟು ಅವರನ್ನು ಗೋಳುಗುಟ್ಟಿಸಿ ಅವರಿಂದ ಬೈಗುಳ ತಿನ್ನುವುದೂ ಮಾಮೂಲೀ!

ನಮ್ಮ ಗುಂಪೊಂದು ಕುಣಿಯುತ್ತ ನೆಗೆಯುತ್ತ ಬಾಯಿಬಂದಂತೆ ಅರಚಿ ಕೊಳ್ಳುತ್ತ ಬರುತ್ತಿತ್ತು. ನಮ್ಮ ಮುಂದೆ ಹುಡುಗಿಯರದೊಂದು ಗುಂಪು ಹೋಗುತ್ತಿತ್ತು. ಆ ಗುಂಪಿನಲ್ಲಿ ಯಾರಾರಿದ್ದರೆಂಬುದು ನನಗೆ ಖಂಡಿತ ವಾಗಿಯೂ ಗೊತ್ತಿರಲಿಲ್ಲ ಕಾಣ್ರಿ. ನಾನು ಎಲ್ಲರಂತೆಯೇ

ಕಯ್ಯಾಗೆ ಕವಣೆ
ಮಡಿಲಾಗೆ ನವಣೆ
ಮುಂದ್ಹೋಗೋ ಕನ್ನೆ
ನನಗೊಳ್ಳೆ ಹವಣೆ

ಎಂದು 'ಪದ' ಹೇಳುತ್ತ ಕೇಕೆಹಾಕುತ್ತ ಮುಂದಕ್ಕೆ ಓಡಿಬಂದೆ. ಹುಡುಗಿ ಯರ ಗುಂಪಿನ ಕಡೆ ಕಣ್ಣು ಹೊರಳಿಸಿದೆ, ಮುಂದೆ ಹೋಗುತ್ತಿದ್ದವಳು ಗಂಗೆ! "ಸುಮ್ಮನೆ ದಾರಿಹಿಡಿದು ಹೋಗೋದಕ್ಕಾಗೋದಿಲ್ವೇನೊ, ಏನಾದರೂ ಅನ್ನಿಸಿಕೋಬೇಕಲ್ಲ! ರಸ್ತೇಲಿಲ್ಲಾ ಇವರ ಹುಡುಗಾಟವೇ" ಎನ್ನುತ್ತ ನನ್ನನ್ನು ತಿನ್ನುವಳಂತೆ ನೋಡಿದಳು. ನಾನಂತೂ ಆಕೆಯ ಮಾತು ಕೇಳ ದವನಂತೆ ಮುಂದು ಮುಂದೆ ನಡೆದೆ. ಓಡಿಹೋಗಿ ಇನ್ನೊಂದು ಹುಡುಗರ ಗುಂಪುಸೇರಿ ಬದುಕಿಕೊಂಡೆ. ಆಕೆಯೂ ತನ್ನ ಬಳಗದೊಂದಿಗೆ ತನ್ನ ಹಾದಿ ಹಿಡಿದು ಹೋದಳು. ಯಾಕಾದರೂ ಆ ಪದ ಹೇಳಿದೆನೋ ಎನ್ನಿಸಿತು ನನಗೆ. ನಾನು ಗಂಗೆಯ ಮುನಿಸು ಮಿಂಚಿದನ್ನು ನೋಡಿದ್ದು ಅಂದೇ. ಅಲ್ಲದೆ ಆ 'ಮದುವೆ' ನಡೆದ ಮೇಲೆ ನಾನು ಅವರ ಮನೆಗೆ ಹೋದರೂ ಆಕೆ ನನ್ನೊಂ ದಿಗೆ ಹೆಚ್ಚಾಗಿ ಮಾತೇ ಆಡುತ್ತಿರಲಿಲ್ಲ. ನಾನು ಅವರ ಮುಂದಿನ ಮನೆಯ ಬಾಗಿಲಿನ ಹೊಸ್ತಿಲವನ್ನು ದಾಟುವುದಕ್ಕೂ ಅವಳು ನಡುಮನೆಯಿಂದ ಒಳ ಕೋಣೆಗೆ ಕಾಲಿಡುವುದಕ್ಕೂ ಸರಿಹೋಗುತ್ತಿತ್ತು. ನಾನು ಅವರಮ್ಮನ ಸಂಗಡ ಹರಟುತ್ತ ಕುಳಿತಿದ್ದರೆ ಕೋಣೆಯ ಕಿಟಿಕಿಯ ಸಂದಿಯಲ್ಲಿ ಎರಡು ಕಣ್ಣುಗಳು ಮಾತ್ರ ಕಾಣುತ್ತಿದ್ದುವು.

ಮಾರನೆಯ ದಿನ ಬೆಳಗ್ಗೆ ಗಂಗೆಯ ಮನೆಗೆ ಹೋದೆ. ಅವಳನ್ನು ಕಂಡು ಮಾತಾಡಿಸಿ "ಮಹಾರಾಯಿತಿ, ನಿಜವಾಗಿಯೂ ರಾತ್ರಿ ನಿನ್ನನ್ನು

ಉದ್ದೇಶಿಸಿ 'ಪದ' ಹೇಳಲಿಲ್ಲ. ಯಾರನ್ನು ಕುರಿತೂ ಹೇಳಲಿಲ್ಲ. ನೀನು ಅಲ್ಲಿದ್ದೆಯೆಂಬುದೂ ನನಗೆ ಗೊತ್ತಿರಲಿಲ್ಲ" ಎಂದು ಸಮಾಧಾನ ಹೇಳುವುದಕ್ಕಾಗಿ ಆಕೆಯ ಮನೆಗೆ ಹೋಗಿದ್ದು. ಗಂಗೆ—ಅವರಮ್ಮ ಪದಗಾರ್ತಿ.

ಎಲ್ಲೆಲ್ಲಿ ನೋಡಿವರು ನಲ್ಲನಂಥವರಿಲ್ಲ।
ಹಲ್ಲು ನೋಡಿದರೇ ಹವಳವೇ। ನಲ್ಲನ
ಸೊಲ್ಲು ಕೇಳಿದರೇ ಸಮಾಧಾನ॥
ಯಾಲಕ್ಕಿ ಕಾಯ್ಸುಲಿದು ಯಾವಡಿಗಿ ಮಾಡಲಿ।
ಊರಿಗ್ಹೋಗ್ಯಾರೆ ರಾಯರು। ಬಾರದೆ।
ಯಾವಡಿಗೆ ಮಾಡಿ ಫಲವೇನ॥

ಎಂದು ಸಣ್ಣದನಿಯಲ್ಲಿ ಅನ್ನುತ್ತ ಹೂ ಪೋಣಿಸುತ್ತಿದ್ದಳು. ನಾನು ಒಳನುಗ್ಗಿದೆ. ಗಂಗೆ ಹೂಬುಟ್ಟಿ ನಾರು ತೆಗೆದುಕೊಂಡು ಕೋಣೆಯೊಳಕ್ಕೆ ಓಟ! ಅವರಮ್ಮ ನೀರಿಗೆ ಹೋಗಿದ್ದರು. ಯಾರ ಸಂಗಡ ಮಾತಾಡಲಿ?............ ಒಂದು ಹವಣುಮಾಡಿ ತೆಗೆದೆ ಬಲೆಯನ್ನು. ನಡುಮನೆಯ ಒಂದು ಮೂಲೆಯಲ್ಲಿ ವಿವಿಧ ನೂತನ ವಸ್ತ್ರಗಳಿಂದ, ಸಿಂಗಾಡಿ, ಇಂಗಾರಗಳಿಂದ, ಬಣ್ಣಬಣ್ಣದ ಪೂಮಾಲೆಗಳಿಂದ ಅಲಂಕೃತವಾಗಿದ್ದ ಒಂದು ಸುಂದರ ಮಂಟಪದಲ್ಲಿ ಒಂದು ದೊಡ್ಡಬಂಡಿ ಶೋಭಿಸುತ್ತಿತ್ತು. ಬಂಡಿಯ ಮುಂಭಾಗದಲ್ಲಿ—ಪೂಜೆಮಾಡುವುದು ಎರಡು ಚಕ್ರಗಳು ಮಾತ್ರ—ನಂದಾದೀವಿಗೆ, ಪಂಚಾರತಿ ಮತ್ತು ಹೊತ್ತಿಗೆಗಳ ಗಂಟು ಇದ್ದುವು. ಆ ಹೊತ್ತಿಗೆಗಳನ್ನು ನೋಡಲಿಷ್ಟವುಳ್ಳವನಂತೆ ಗಂಟಿಗೆ ಕೈಹಾಕಿದೆ. ಬಂತಲ್ಲ ಬೇಟೆ! ಆ ಕೂಡಲೇ ಒಳಗಿನಿಂದ. ಕೋಣೆಯಿಂದ ಸರಕ್ಕನೆ ತೇಲಿಬಂದು "ಗಂಟು ಬಿಚ್ಚಬೇಡಿ, ಅದನ್ನು ಪೂಜೆಗೆ ಇಟ್ಟಿದೆ. ಬೇಕಾದರೆ ಪೂಜೆಯನ್ನು ಇಳುವಿದ ಮೇಲೆ ಮತ್ತೆ ಬಂದು ನೋಡಬಹುದು" ಎಂದಳು. ಆಗ ಬರುವ ರಭಸದಲ್ಲಿ ಮಂಟಪದ ಮುಂಭಾಗದಲ್ಲಿ ಕಟ್ಟಿದ್ದ ಒಂದು ಪುಷ್ಪಹಾರ ಅವಳ ತಲೆ ತಾಕಿ ನೇತಾಡುತ್ತಿತ್ತು. ನಾನು ಆ ಹೂಮಾಲೆಯನ್ನು ಥಟ್ಟನೆ ಹಿಡಿದು ಅಲ್ಲಿಯೇ ನಿಂತಿದ್ದ ಅವಳ ಕೊರಳಿಗೆ ಹಾಕಹೋದೆ ತಮಾಷೆಗೆ! ಆಕೆ ಜಿಂಕೆಯಮರಿಯಂತೆ ರೊಯ್ಯನೆ ದೂರ ಚಿಗಿದು "ದಿನಾಲೂ ಇದೇ ಹುಡುಗಾಟ. ರಾತ್ರಿ ಹಾಗೆ ಮಾಡಿದಿರಿ, ಈಗ ಈ ಆಟ" ಎಂದು ಶಿಡುಕಿದಳು, ಆ ಅಗಲವಾದ ಕಣ್ಣುಗಳನ್ನು ಇನ್ನೂ

ಅರಳಿಸಿ. ನನ್ನ ಕೈಬೆರಳುಗಳು ಆ ಹೂವು ಗಲ್ಲಕ್ಕೆ ಸೋಂಕಿದುವು. ನನಗೆ ಆ ವಯಸ್ಸಿನಲ್ಲೂ ಆ ಕೋಮಲ ಸ್ಪರ್ಶ ಎಷ್ಟು ಹಿತಕರ! ಎಂತಹ ಆಪ್ಯಾಯನ! ನಾನೆಲ್ಲ, ನಾನೆಲ್ಲ ಆ ಬೆರಳುಗಳೇ ಆದೆ. "'ರಾತ್ರಿ ಹಾಗೆ ಮಾಡಿದಿರಿ?' ನಾನೇನು ಮಾಡಿದೆ" ಎಂದೆ. ಸಮಾಧಾನ ಹೇಳಬೇಕೆಂದು ಗಟ್ಟಿ ಮಾಡಿಕೊಂಡು ಬಂದಿದ್ದೆನಲ್ಲಾ ಅದನ್ನೆಲ್ಲಾ ಮರೆತೇಬಿಟ್ಟೆ ಆಕೆಯನ್ನು ನೋಡಿ ನುಡಿಸಿದ ಕೂಡಲೆ.

ಗಂಗೆ—"ಕಂಡವರಿಗೆಲ್ಲಾ ಗೊತ್ತಾಗಬೇಕೇನೋ?" ಮಾತಿನಲ್ಲಿ ಮುನಿಸು ಬೆರೆತಿತ್ತು.

"ಏನು? ಗೊತ್ತಾಗಿದ್ದು?" ಎಂದೆ ಮತ್ತೆ.

"ಎಲ್ಲಾ ಪಿತ್ತರಿಸಿ ಹೇಳಬೇಕೇನೊ. ರಾತ್ರಿ ಅರಿಚಿಕೊಂಡಿದ್ದು."

"ಯಾರು? ನೀನೇ? ಕನಸಿನಲ್ಲಿ ಅರಿಚಿಕೊಂಡೆಯಾ?" ಅರಿಯದವನಂತೆ ಕೇಳಿದೆ.

"'ಯಾರು?' ತಾವು." ಎಷ್ಟು ಹಿತಕರವಾಗಿತ್ತು ಆ ಮುನಿಸು!

"ನಾನೇನು ಕೂಗಿಕೊಳ್ಳಲಿಲ್ಲವಲ್ಲಾ. ಆದೂ ನಾನು ನಮ್ಮನೇಲಿ ಮಲಗಿದ್ದೆ ನಿನಗೆ ಹೇಗೆ ಗೊತ್ತಾಯಿತು ನಾನು ಅರಚಿಕೊಂಡದ್ದು?"

"ರಾತ್ರೀ ಪಂಚಾಡುತ್ತಿದ್ದಾಗ 'ಪ್ಯದಾ' ಹೇಳಿದ್ದು ಅಯ್ನೋರೇ, 'ಪ್ಯದಾ' ಹೇಳಿದ್ದು." ಗಂಗೆಯೆಂದಳು ಅಣಕಿಸುವ ದನಿಯಲ್ಲಿ. ಆ ತುಟಿಗಳು ಕೊಂಕುನುಡಿಯನ್ನೂ ಆಡಬಲ್ಲುವು!

"ಏನು ಹೇಳಿದ್ದು? ಏನು 'ಪ್ಯದ' ಹೇಳಿದ್ದು?"

"ಏನೋ......" ಸಿಡಿಕಿಬಿಟ್ಟು ಒಳಗೆ ಹೋಗುವುದಕ್ಕೆ ಅನುವಾದಳು.

"ಅದೇನು ಹೇಳು ಗಂಗಾ. ಇಷ್ಟು ದಿನ ನನ್ನೊಂದಿಗೆ ಮಾತಾಡದೆ ಇರುವುದು ನನ್ನ ಮೇಲೆ ಹೀಗೆ ರೇಗುವುದಕ್ಕೇ ಏನು?"

"ಹೊತ್ತಿಲ್ಲ ಗೊತ್ತಿಲ್ಲ, ಮನಸಿಗೆ ಬಂದಹಾಗೆ ಅಂದುಬಿಟ್ಟರೆ ಗಂಡಸು! ಹೆಂಗಸಿಗೂ ಮಾನವಿಲ್ಲವೇನು?"

ಆಕೆ ಅಷ್ಟೊಂದು ರೇಗಿದ್ದು, ಅಂಥಾ ಪುಟ್ಟ ಉಪನ್ಯಾಸಮಾಡಿದ್ದು ನಾನು ಕಂಡಹಾಗೆ ಅದೇ ಮೊದಲು. ಆ ಮಾತು ಕೇಳಿ ನನಗೆ ಆಶ್ಚರ್ಯವಾಯಿತು. ಮತ್ತೆ ಕೇಳಿದೆ.

"ನಿನ್ನ ಮನಸ್ಸಿನಲ್ಲಿ ಏನಿದೆ ಬಾಯಿಬಿಟ್ಟು ಬಿಚ್ಚಿ ಹೇಳಿಬಿಡು ಗಂಗಾ. ನಾನು ನಿಮ್ಮನೆಗೆ ಬರಬಾರದೇನು? ಹೋಗಲಿ ಬಿಡು ಬರೋದಿಲ್ಲ."

"ದಿನಾಲೂ ಬನ್ನಿ ಯಾರು ಬೇಡ ಅನ್ನೋರು. ನಿನ್ನೆ ರಾತ್ರಿ ಆ ಪದ ಹೇಳಿದಿರಲ್ಲಾ, ಅದಕ್ಕೇ ನನಗೆ ಕೋಪಬಂದದ್ದು."

"ಯಾವ ಪದ?"

"ಅದನ್ನು ಬಿಚ್ಚಿ ಹೇಳಬೇಕೇನೊ?" ಏನೂ ಅರಿಯದ ಹಸುಗೂಸು!

ಗಂಗೆಯ ಕಣ್ಣಿನಲ್ಲಿ ಕಣ್ಣೀರು ಇಣಿಕಿ ನೋಡುತ್ತಿತ್ತು. ಇನ್ನು ಕೆಣಕಬಾರದೆಂದು 'ಬೇರೆ ವಿಷಯ' ಎತ್ತಿದೆ.

"ಈ 'ಬನ್ನಿ' 'ಹೋಗಿ' ಯಾವಾಗ ಕಲಿತದ್ದು?"

"ಯಾವಾಗಲೋ ಗೊತ್ತಿಲ್ಲ" · ಹುಪ್! ಮುಖ ಕುಂಬಳ ಕಾಯಿ!

"ಹೋಗಲಿ ಬಿಡು, ಇವೊತ್ತು ಎದ್ದು ಯಾರ ಮುಖ ನೋಡಿದ್ದೆನೋ ಇನ್ನು ನಾಳೆಯಿಂದ ಇಲ್ಲಿಗೆ ಬರೋದಿಲ್ಲ" ಎನ್ನುತ್ತ ಹೊರಡಲು ಹೊರಟೆ. ಅಲ್ಲ, ಹೊರಡುವವನ ಹಾಗೆ ಮಾಡಿದೆ. ಆಗ ಗಂಗೆಯ ಸಿಟ್ಟು ಇಳಿಯಿತು. ಒಂದುಸಾರಿ ಕಿಲಕಿಲನೆ ನಕ್ಕಳು. ಎಷ್ಟು ಚೆನ್ನು ಆ ನಗು! ವಜ್ರದ ಮೂಗು ಬಟ್ಟಿನ ಕಾಂತಿ, ಆ ರದನಚ್ಛಾಯೆ, ಆ ನಗುವಿನ ಕಾಂತಿ, ಅದನ್ನೆಲ್ಲಾ ನಾನಂತೂ ಬಣ್ಣಿಸಲಾರೆ. ಬಾಯಿ ಮುಚ್ಚಿಕೊಂಡು ಸುಮ್ಮನಿರುವುದೇ ಗೌರವ. "ಎರಡೇ ಎರಡು ಕರಿಗಡುಬು" ಎನ್ನುತ್ತ ಒಳಗೆ ಹೋಗಿ ಎರಡೂ ಕೈತುಂಬ ಕರಿಗಡುಬು, ಒಂದು ತಂಬಿಗೆಯಲ್ಲಿ ಹಾಲು ತಂದಿಟ್ಟಳು. ನನಗೂ ಬಾಯಲ್ಲಿ ನೀರೂರಿತ್ತು. ಒಲ್ಲೆನೆಂದು ಹೇಗೆನ್ನಲಿ ಗಂಗೆ ತಂದಿಟ್ಟುದನ್ನು. ಕುಳಿತೆ ಸವಿಯಲು.

ಆ ಭಕ್ಷ್ಯಗಳಲ್ಲಿ ಒಂದರ ಕಡೆಗೆ ನನ್ನ ಕೈ ಹರಿಯಿತು, ಚಿತ್ತಾರದ ಮುರಿದಿರುವಿದ ಕಡುಬಿಗೆ. ಒಡೆದು ನೋಡುತ್ತೇನೆ: ಅದರೊಳಗೆ ಬಾಳೆಕಾಯಿ ತುಂಬಿದ್ದಾಳೆ ಕಳ್ಳಿ! ನಾನು ಅದಕ್ಕೆ ಕೈಹಾಕಿ ಮುರಿದಿದ್ದನ್ನು ನೋಡುತ್ತ ಕುಸುಕುಸು ನಗುತ್ತಿದಾಳೆ ಹೊಮ್ಮುಸುಕಿನ ಸೆರಗನ್ನು ಬಾಯಿಗೆ ಮರೆ ಮಾಡಿಕೊಂಡು. 'ಇರಲಿ' ಎಂದುಕೊಂಡು.

"ನೀನು ತಿನ್ನುವುದಿಲ್ಲವೇ."

"ತಮ್ಮದಾಗಲಿ" ಪ್ರಸನ್ನವಾಣಿ.

ನಾವು 'ಮದುವೆ' ಯಾದಾಗ ಎಂಜಲು ತಿನ್ನಿಸುವ ಶಾಸ್ತ್ರವೂ ನಡೆಧಿತ್ತು.

"ಓಹೋ ಮರೆತೆ ನಾನು ತಿಂದು......."

"ಸಾಕು ಬಾಯಿಮುಚ್ಚಿ, ತಡೆಯಿರಿ ಅಮ್ಮ ಬರಲಿ ಹೇಳ್ತೀನೆ."

ಅವರಮ್ಮನೂ ಬಂದರು.

"ಏನಪ್ಪಾ ತೀರ್ಥರ್, ಹಬ್ಬವಾಯಿತೇನು? ಇನ್ನೂ ಎಂಟು ದಿನ ಬಿಟ್ಟು ನಮ್ಮನೆಗೆ ಬಂದಿದ್ದರೆ ಪಾಡಾಗತಿತ್ತು. ಬಡವರ ಮನೆಗೆ ಯಾಕೆ ಬಂದೀಯಪ್ಪ."

"ಇಲ್ಲ, ಇಲ್ಲ, ಬರೋದಿಲ್ಲ, ಬರೋದೂ ಬೇಡ ನಿನ್ನ ಮಗಳಿಂದ ಅನ್ನಿಸಿ ಕೊಳ್ಳೋದೂ ಬೇಡ" ಎಂದೆ.

"ಅಂಥಾ ದೊಡ್ಡ ಮಾತು ಆಡಿಬಿಟ್ಟಳೇ ಗಂಗೆ?" ಎಂದರು ಅವರಮ್ಮ, ಗಂಗೆ ಮುರುಕಮಾಡುತ್ತ "ನೋಡಮ್ಮ, ನನ್ನ ಎಂಜಲು ತಿನ್ನುಬಾ ಅಂತಾ ಕರೀತಾರೆ" ಎನ್ನುತ್ತ ಅಳುವಳಂತೆ ಮಾಡಿದಳು.

ಅವರಮ್ಮ—"ಆಕಾಲ ಬರಲಿ ಎನ್ನಬೇಕಾಗಿತ್ತು, ಅದಕ್ಕೇಕೆ ಕೋಪ."

ಅಷ್ಟುಹೊತ್ತಿಗೆ ಮನೆಯಿಂದ ಕರೆಬಂತು. ತಿನ್ನುವಷ್ಟನ್ನೇ ತಿಂದು ಉಳಿಸುವಷ್ಟನ್ನು ಉಳಿಸಿ ಮನೆಗೆ ಹೋದೆ.

* * * *

ನಾನು ಅಷ್ಟು ದೊಡ್ಡವನಾಗಿದ್ದರೂ ಇನ್ನೂ ನಾಲ್ಕು ರೂಪಾಯಿನ ಪರೀಕ್ಷೆಗೇ ಓದುತ್ತಿದ್ದೆ. ನಾನು ದಡ್ಡನೆಂದು ಯಾರೂ ತಿಳಿಯಬಾರದು. ನಾನು ಮೊದಲು ಪಾಠಶಾಲೆ ಹೊಕ್ಕಾಗ ನನ್ನ ಹಲ್ಲು ಅಷ್ಟೂ ಬಿದ್ದು ಹುಟ್ಟಿರಲೇ ಇಲ್ಲ. ಆ ನಾಲ್ಕು ರೂಪಾಯಿನ ಪರೀಕ್ಷೆಗಾಗಿ ಹತ್ತಿರದ ಸಲ್ಲಿಯಿದ್ದೂರಿಗೆ ಹೋಗ ಬೇಕಾಗಿತ್ತು. ನಮ್ಮೂರ ಹುಡುಗರು ಪರೀಕ್ಷೆಗೆ ಹೋಗುವ ರೀತಿಯೇ ವಿಲಕ್ಷಣ. ಕಲ್ಲಿಂಬೋ ದೇವರಿಗೆಲ್ಲಾ ಅಂದು ಹಣ್ಣುಕಾಯಿ ಕರ್ಪೂರದ ಪರ್ವ. ಹಲವು ದೇವರುಗಳಿಗೆ ಹರಕೆ ತೆಗೆದುಕಟ್ಟುತ್ತಾರೆ. ಬೇಕಾದವರ ಮನೆಗೆ ಹೋಗಿ ಹಿರಿಯರ ಕಾಲಿಗೆ ಬಿದ್ದು ಅವರಿಂದ ಆಶೀರ್ವಾದ ಪಡೆದು ಪರೀಕ್ಷೆಗೆ ಹೊರಡು ತ್ತಾರೆ. ನಾನೂ ಮಾಮೂಲಿನಂತೆ ಮಾಡಿದೆ. ಗಂಗೆಯ ತಾಯಿಗೆ ನಮ ಸ್ಕಾರ ಮಾಡಿ ಹಾಗೆಯೇ ಮುಂದಕ್ಕೆ ಹೊರಡೋಣವೆಂದು ಗಂಟುಮೂಟೆ

ಸಹಿತವಾಗಿಯೇ ಹೊರಟೆ. ಅವರಿಗೆ ನಮಸ್ಕರಿಸಿ ಅವರ ಆಶೀರ್ವಾದಗಳನ್ನೂ ಗಂಟುಮೂಟೆಗಳನ್ನೂ ಹೊತ್ತುಕೊಂಡು ಹೊರಹೊರಟೆ. ಇನ್ನೇನು ಮಾಡುವುದು? ಗಂಗೆ ಮನೆಯಲ್ಲಿರಲಿಲ್ಲ. ಮನಸ್ಸಿಲ್ಲದ ಮನಸ್ಸಿನಿಂದ ಅವರ ಮನೆಯಿಂದ ಹೊರಬಿದ್ದೆ. ಎರಡು ಮನೆಗಳನ್ನು ದಾಟಿದ್ದೆನೇನೊ- ಗಂಗೆ ಅಲ್ಲಿಯೇ ಇದಾಳೆ! ತುಂಬಿದ ಜೋಡುಕೊಡಗಳನ್ನು ಹೊತ್ತು ತರುತ್ತಿದ್ದ ಮುತ್ತೈದೆಯೊಬ್ಬಳನ್ನು ತಡೆದು ನಿಲ್ಲಿಸಿ "ಏ, ನಿನಗೆ ಅಕ್ಕಾ ಅಂತೇನೆ ತಡಿಯೇ, ಅವ್ವಾ ಅಂತೇನೆ ನಿಲ್ಲೇ 'ಅವರು' ಹೋದಮೇಲೆ ಹೋಗುವೆ ಯಂತೆ. ಬೇಕಾದರೆ ನಿಮ್ಮನೆಗೆ ನಾಲ್ಕು ಗಡಿಗೆ ನೀರನ್ನೂ ಆಡಕುತ್ತೇನೆ" ಎಂದು ದೀನಸ್ವರದಲ್ಲಿ ಆ ಮುತ್ತೈದೆಯನ್ನು ಅಂಗಲಾಚಿ ಬೇಡಿಕೊಳ್ಳು ತ್ತಿದ್ದಾಳೆ. ಮಾರುಗ್ಗೈಹಾಕಿ ಅಡ್ಡಗಟ್ಟಿಬಿಟ್ಟಿದ್ದಾಳೆ. ನಾನು ಬರುವ ಸದ್ದು ಕೇಳಿ ಹಿಂತಿರುಗಿ ನೋಡಿ ಆ ಮುತ್ತೈದೆಯನ್ನು ಹೋಗಗೊಟ್ಟಳು. ಅಂತೂ ಶುಭಶಕುನವಾಯಿತು.

* * * *

ನಾನೇನೋ ಪರೀಕ್ಷೆಯಲ್ಲಿ ಚನ್ನಾಗಿ ಉತ್ತರ ಬರೆದಿರಲಿಲ್ಲ, ಆದರೂ ತೇರ್ಗಡೆ ಹೊಂದಿದೆ. ಪ್ರೌಢ ವ್ಯಾಸಂಗಕ್ಕಾಗಿ ಪಟ್ಟಣ ಸೇರಿದೆ. ಜೊತೆಯ ಗೆಳೆಯರಿದ್ದರು, ಪ್ರೌಢಶಾಲೆಯಿತ್ತು, ವಿದ್ಯಾರ್ಥಿಸಂಘ, ವಾಚನಭಾಷಣ, ಚರ್ಚಾಕೂಟ. ಎಲ್ಲಕ್ಕೂ ಮಿಗಿಲಾಗಿ ಹೊಟೇಲು, ಸಿನೆಮಾಗಳು. ಇಷ್ಟಿ ದ್ದರೂ ನಾನು ಒಂಟಿಯಾಗಿಯೇ ಕಾಲಕಳೆಯುತ್ತಿದೇನೆಂದು ಭಾಸವಾಗು ತ್ತಿತ್ತು. ತಳ್ಳಿದೆ ಕಾಲವನ್ನು. ರಜಾಕ್ಕೆ ಊರಿಗೆ ಬಂದೆ.

ಊರಲ್ಲಿ ಅನೇಕ ಅನಿರೀಕ್ಷಿತ ಬದಲಾವಣೆಗಳಾಗಿದ್ದುವು. ನಮ್ಮ ಮನೆಯವರಿಗೂ ಗಂಗೆಯ ಮನೆಯವರಿಗೂ ಯಾವುದೋ ಒಂದು ಹೊಲದ ಸಂಬಂಧದಲ್ಲಿ 'ಮಾರಾಮಾರಿ' ಹೊಡೆದಾಟ ನಡೆದು ಎರಡು ಮನೆಯವರೂ ಕೋರ್ಟು ಮೆಟ್ಟಲುಹತ್ತಿದ್ದರು. ನಾನು ಊರಿಗೆ ಹೋದ ದಿವಸವೇ ತಂದೆ ಯವರು ಹೇಳಿಬಿಟ್ಟರು. "ಲೇ ತೀರ್ಥ, ಆ ಸೂ....ಮಗನ ಮನೆಯ ಮೆಟ್ಟು ಗಲ್ಲು ಹತ್ತಿದೆಯೆಂದರೆ ನೋಡು, ನೀನು ನನ್ನ ಮಗನಲ್ಲ ನಾನು ನಿನ್ನ ತಂದೆ ಯಲ್ಲ. ನಿನ್ನ ಓದಿಗೆ ಅಲ್ಲಿಗೇ ಮುಗುತಾಯ, ಬೇಸಾಯ ಬಾರಿನಕೋಲಿಗೇ

ಸೊಪಿಯಾಗುತ್ತೀ. ಎಚ್ಚರ. ನನಗಂತೂ ಸಾವೇ ಗತಿ, ನಮ್ಮನೇಲಿ ನನಗೆ ಎರಡು ಎಣಿಸುವವನಿದ್ದರೆ. ನೀನು ಮಾತ್ರ ಆ ಕಡೆಗೆ ತಲೆಹಾಕಿಯೂ ಮಲಗಬಾರದು. ಅವರ ಮನೆಯವರನ್ನು ಕನಸುಮನಸಿನಲ್ಲಿಯೂ ನೆನೆಯಬಾರದು” ಎಂದು ಆಜ್ಞೆಮಾಡಿಬಿಟ್ಟರು. ನಾನು ತಲೆ ತಗ್ಗಿಸಿಕೊಂಡು ಸುಮ್ಮನೆ ನಿಂತಿದ್ದೆ, ಯಾವ ಉತ್ತರವನ್ನೂ ಕೊಡಲಿಲ್ಲ. ಅವರಿಗೆ ಉತ್ತರವೂ ಬೇಕಾಗಿರಲಿಲ್ಲ ಅನ್ನಿ. ಏನು ಹೇಳಿದರೂ ಆ ಕೂಡಲೇ ಅದರಂತೆ ನಡೆದುಬಿಡಬೇಕು, ಇಲ್ಲದಿದ್ದರೆ ಅನಾಹುತಗಳೇ ನಡೆದುಬಿಡುವುವು. ಅವರಿಗೆ ತಿರುಗಿಬೀಳುವುದನ್ನು ನೆನಸಿಕೊಂಡರೇ ಮೈಜುಮ್ಮೆನ್ನುತ್ತದೆ. ಅಂಥಾ ಸಿಪಾಯಿ ನಮ್ಮ ತಂದೆ.

ಮೊದಲ ವರ್ಷ ಬೇಸಗೆ ರಜೆಯಲ್ಲಿ ಹೇಳುವಂತಹ ಹೆಚ್ಚಿನ ಸಂಗತಿಗಳೇನೂ ನಡೆಯಲಿಲ್ಲ. ನನ್ನ ಮತ್ತು ಗಂಗೆಯ ಕೊರಗಿನ ಹೊರತು. ಅವಳಿಗೂ ಅವರ ತಂದೆಯಿಂದ ಇದೇ ರೀತಿಯ ಕಟ್ಟಪ್ಪಣೆಯಾಗಿತ್ತೆಂದು ಕಾಣುತ್ತದೆ. ನನ್ನನ್ನು ಕಣ್ಣೆತ್ತಿಯೂ ನೋಡಬಾರದು, ನಮ್ಮ ಮನೆಯ ಕಡೆ ಸುಳಿಯಬಾರದು ಎಂದು. ಊರಲ್ಲಿ ಮೂರುನಾಲ್ಕು ಮದುವೆ ನಡೆದುವು. ಹೆಣ್ಣುಮಕ್ಕಳು ಪರೆಬಿಟ್ಟು ಹೊರಗೆ ಬರುವುದಕ್ಕೆ ಅದೊಂದು ಸದವಕಾಶ. ಆ ಮದುವೆಗಳಲ್ಲಿ ನೋಡಬಹುದಾದ ಯಾವುದನ್ನೂ ನೋಡದೆ ಬಿಡಲಿಲ್ಲ ನಾವು. ಗಂಗೆ ತೀವ್ರ ಆಸಕ್ತಿಯಿಂದ ಅತೀವ ಶ್ರದ್ಧೆಯಿಂದ ಮದುವೆಯ ಕಾರ್ಯಗಳೆಲ್ಲವನ್ನೂ ಅವಲೋಕಿಸುತ್ತಿದ್ದಳು. ನಮ್ಮಿಬ್ಬರ ಕಣ್ಣುಗಳೇ ಮಾತಾಡಿಕೊಳ್ಳುವುವು. ಒಂದೆರಡುಬಾರಿ ದೇವರು ಗುಡಿಬಿಟ್ಟು ಹೊರಗೆ ಬಂದಿತ್ತು ಯಾವುಯಾವುದೋ ಹಬ್ಬಗಳಲ್ಲಿ. ನಾವಿಲ್ಲದಿದ್ದರೆ ದೇವರ ಮೆರವಣಿಗೆಯೂ ಅರಕೆಯೇ. ಆದರೇನು. ನಾವಿಬ್ಬರೂ ಸ್ನೇಹಬೆಳಸಲು ಎಳಸಿದಷ್ಟೂ ನಮ್ಮ ಮತ್ತು ಅವರ ಮನೆಯವರ ವ್ಯಾಜ್ಯ ಬಲಿಯುತ್ತಿತ್ತು. ವ್ಯಾಜ್ಯವನ್ನು ಕೊನೆಗಾಣಿಸಿ ರಾಜಿಮಾಡಿಸೆಂದು ದೇವರಿಗೆ ಕೈಮುಗಿದು ಬೇಡಿಕೊಂಡೆ. ಗಂಗೆಯಂತೂ ಅದೊಂದೇ ದೇವರಿಗೆ ಏಕೆ, ಕಂಡಕಂಡ ದೇವರಿಗೆಲ್ಲಾ ಕೈಮುಗಿದಿರಬೇಕು, ಹೇಳಿಕೊಂಡಿರಬೇಕು, ಹರಕೆ ತೆಗೆದು ಕಟ್ಟಿರಬೇಕು.

ಹಟ್ಟಿ (ದಿವಾಳಿ) ಹಬ್ಬಕ್ಕೆ ಮತ್ತು ಮದುವೆ ಸುಗ್ಗಿಗೆ ನಾನು ತಪ್ಪದೆ ಊರಿಗೆ ಬರುತ್ತಿದ್ದೆ. ಅದೇಕೋ ಆ ಸುಗ್ಗಿಗಳಲ್ಲಿ ಊರನ್ನು ಬಿಟ್ಟಿರುವುದಕ್ಕೆ

ಮನಸ್ಸು ಒಪ್ಪುತ್ತಿರಲಿಲ್ಲ. ಹೀಗೆಯೇ ನಾಲ್ಕು ಮದುವೆ ಸುಗ್ಗಿ ನಾಲ್ಕು ಹಟ್ಟಿ ಹಬ್ಬ ಬಂದು ಹೋದುವು.

ಕಾಲಗತಿಸಿದಂತಲ್ಲ ಆ ದ್ವೇಷವೃಕ್ಷವೇನೋ ಚನ್ನಾಗಿ ಬೆಳೆದು ಇನ್ನೂ ಹೆಚ್ಚಾಗಿ ಕವಲೊಡೆಯುತ್ತಿತ್ತು, ನನ್ನ ಮತ್ತು ಗಂಗೆಯ ಆಸೆಯ ಸಸಿಯಂತೆ. ನಾವು ಒಳ್ಳೇ ಆಸ್ತಿವಂತರು, ಆಸ್ತಿಗೆಲ್ಲಾ ನಾನೊಬ್ಬನೇ ಮಗ, ತಕ್ಕಮಟ್ಟಿಗೆ ವಿದ್ಯಾವಂತ. ಸರಿ. ಪೇಟೆಪಟ್ಟಣಗಳಿಂದ ಬೆಳ್ಳಕ್ಕಿಗಳು ಬಂದಿಳಿಯಲಾರಂಭಿಸಿದುವು; ನಮ್ಮ ತಂದೆಗೆ ದಿನವೂ ಕಾಟಹಾಕುತ್ತಿದ್ದುವು. "ಆ ಸೂ.... ಮಗನ್ನ ಯಾವ ಬಗೆಯಿಂದ ಮುರಿಯಲಿ ಎಂದು ಹಗಲು ರಾತ್ರಿ ಚಿಂತಿಸುತ್ತಿರುವಾಗ ಈ ಹೆಣ್ಣಿನವರ ಕಾಟಬೇರೆ" ಎಂದು ಗೊಣಗುತ್ತಿದ್ದರು ತಂದೆಯವರು ಒಳಗೊಳಗೇ. ಈ ವರ್ಷ ಮದುವೆಮಾಡುವುದಿಲ್ಲವೆಂತಲೋ, ನಮ್ಮ ಹುಡುಗನನ್ನು ಇನ್ನೂ ಮುಂದಕ್ಕೆ ಓದಿಸಬೇಕೆಂತಲೋ ಹೇಳಿ ಹೇಳಿ ಆ ಹೆಣ್ಣಿನವರನ್ನು ಕಳಿಸುತ್ತಿದ್ದರು. ನನಗೂ ಅದೇ ಬೇಕಾಗಿತ್ತು. ಇಂದೋ ನಾಳೆಯೋ ಆ ವ್ಯಾಜ್ಯ ಮುರಿದು ರಾಜಿಯಾಗುವರೆಂಬ ನಂಬಿಗೆ ನನಗೆ ಇನ್ನೂ ಇತ್ತು.

ಗಂಡು ಎಷ್ಟು ದಿನವಾದರೂ ಹಾಗೆಯೇ ಇರಬಹುದು. ಹೆಣ್ಣು ಹೆಂಡತಿಯಾಗದೆ ಎಷ್ಟು ದಿನ ಇರಲು ಸಾಧ್ಯ? ಮೊಗ್ಗಲೂರಿನ ಯಾರೋ ಒಬ್ಬರಿಗೆ ಗಂಗೆಯನ್ನು ಕೊಡುವರೆಂಬ ಸುದ್ದಿ ಬಂತು ನನ್ನೆಡೆಗೆ ಸಿಡಿಲಿನಂತೆ. ಅದೂ ಗೊತ್ತಾದುದು ಗಂಗೆಯ ಉಡಿಗೆ ಹಣ್ಣುಕಾಯಿ ಉಡಿಯಕ್ಕಿ ಬಿದ್ದಮೇಲೆ. ಆಕೆ ಅನ್ನ ನೀರು ಮುಟ್ಟದೆ ಮೂರು ದಿನ ಮೂಲೆ ಹಿಡಿದು ಮಲಗಿದ್ದಳಂತೆ. ಆಡಲುಬಾರದು, ಅನುಭವಿಸತೀರದು. ಆಡಿದರೆ ಸರಿ, ಊರೆಲ್ಲಾ ಕೂಗಿ ಬಿಡುತ್ತದೆ ಬಾಯಿಗೆ ಬಂದಂತೆ: ಬಜಾರಿ, ಅಂತವಳು, ಇಂತವಳು, ತಾಯಿ ತಂದೆಗಳ ಮಾತು ಮೀರಿದವಳು ಎಂದು. ನನಗೆ ಆ ಸುದ್ದಿ ಗೊತ್ತಾದ ಮರುದಿನವೆಂದು ಕಾಣುತ್ತದೆ. ಗುಡಿಯ ಕಟ್ಟೆಯ ಮೇಲೆ ಕುಳಿತಿದ್ದೆ. ಗಂಗೆ ಬಾವಿಯ ಕಡೆಯಿಂದ ನೀರು ಹೊತ್ತು ತರುತ್ತಿದ್ದಳು. ನೋಡಿದಳು ನನ್ನನ್ನು. ಕೊಡಕ್ಕಿಂತ ಹೆಚ್ಚಾಗಿ ಆ ಕಣ್ಣುಗಳೇ ನೀರಿನಿಂದ ತುಂಬಿದ್ದುವು. ತುಂಬಿದ ಕೊಡ ತುಳುಕೀತೆ? ನಾನೇನು ಮಾಡುವಂತಿದೆ? ಮಾತಾಡಿಸುವ ಪುಣ್ಯ ಸಹ ಇಲ್ಲ. ನಾನು ತಂದೆ ಹಾಕಿದ ಗೆರೆಯನ್ನು ದಾಟಬಾರದು; ಅವರ

ಮಾತು ಮೀರುವುದಿರಲಿ ಅವರ ಉಗುಳನ್ನೂ ದಾಟಬಾರದು! ಆಕೆಯನ್ನು ನೋಡಿದ್ದೇ ಮಹಾ ಪಾಪ ತಂದೆಯ ದೃಷ್ಟಿಯಲ್ಲಿ..........ನಮ್ಮಿಬ್ಬರ ನಡುವೆ ನಮ್ಮ ಅವಳ ಮನೆಯವರ ದ್ವೇಷದ ಮಹಾ ಸಾಗರ! ನಾನೇ ಆ ಕೊಡ ವಾಗಿದ್ದಿದ್ದರೆ! ಆ ಸೊಂಟದ ಮೇಲಿನ ಕೊಡವಾಗಿದ್ದಿದ್ದರೆ ಎಷ್ಟು ಚೆನ್ನಾಗಿರು ತ್ತಿತ್ತು ಎಂದುಕೊಂಡೆ.

ಈ ಮಧ್ಯೆ ನನಗೆ ಇನ್ನೊಂದು ವಿಧಿಯೊದಗಿ ಬಂತು. ನಮ್ಮ ತಂದೆ ಯವರು ಅವರಿಗೇನು ಗೊತ್ತು ನಮ್ಮ ಕೊರಗು? ತಕ್ಕಡಿ ಬಲ್ಲುದೇ ಬಡತನ ಸಿರಿತನವ?— ನನ್ನನ್ನು ಬೇರೆ ಊರಿಗೆ ಕಳಿಸಿಬಿಟ್ಟರು. ಒಕ್ಕಲು ಕಾಲದಲ್ಲಿ ಅಲ್ಲಿಯೇ ಇದ್ದು ರೈತರಿಂದ ದವಸಧಾನ್ಯ ಮಾಯವಾಗದಂತೆ ನೋಡಿ ಕೊಂಡಿದ್ದು ಆ ದವಸವನ್ನೆಲ್ಲಾ ಸುರಕ್ಷಿತ ಸ್ಥಳದಲ್ಲಿ ಹಾಕಿಸಿ, ರೈತರಿಂದ ಹೊಸದಾಗಿ 'ಸಾಗುವಳಿ ಕರಾರು' ಗಳನ್ನು ಬರೆಯಿಸಿಕೊಂಡು ಬರುವು ದಕ್ಕಾಗಿ ಹೊರಟೆ. ದವಸವನ್ನಾದರೂ ಶೇಖರಸೋಣವೆಂದು. ಅಷ್ಟು ಕೆಲಸ ವನ್ನು ಮುಗಿಸಿಕೊಂಡು ಬರುವುದರೊಳಗಾಗಿ ಗಂಗೆ—ಇನ್ನೇನು ಗಂಗೆಯ ಪಾಲಾದಂತೆಯೇ ಎಂದು ಹೇಳಬೇಕು ಕಣ್ಮುಚ್ಚಿಕೊಂಡು ಯಾರಿಗೋ ಮಾಲೆ ಹಾಕಿ ಅವನ ಕೈಹಿಡಿದುಬಿಟ್ಟಿದ್ದಳು, ಛೆ! ಅಲ್ಲ, ತನ್ನ ಕೈಸಿಗಿಸಿಕೊಂಡಿದ್ದಳು. ಹೆಂಗಸಿಗೆ ಮಂಗಲಕರವಾದ ಆ ಮಂಗಲಸೂತ್ರ ಕೊರಲ ಕೊರೆಯುವ ಕಣ್ಣಿ ಯಾಗಿತ್ತೋ ಏನೋ! ನಾನು ತಿರುಗಿಬಂದು ನೋಡಿದಾಗ ಅವರು ಮನೆಯ ಮುಂದೆ ಹಂದರದ ಗೂಟಗಳೂ ಇರಲಿಲ್ಲ, ಕಿತ್ತೆಸೆದುಬಿಟ್ಟಿದ್ದರು ಅವಳ ಎದೆ ಯೊಲದಿಂದ ನನ್ನನ್ನು ಕಿತ್ತೆಸೆದುಬಿಟ್ಟಂತೆ.

ಮದುವೆ ಮುಂಜಿ ಮೊದಲಾದ ಶುಭಕಾರ್ಯಗಳಲ್ಲಿ ಅನೇಕ ಅನಿ ರೀಕ್ಷಿತ ಘಟನೆಗಳು ನಡೆಯುತ್ತವೆಯಂತೆ. ಸೆಡೆತುಕೊಂಡಿದ್ದ ಬೀಗರು ಒಂದಾ ಗುತ್ತಾರಂತೆ. ಮಾರಾಮಾರಿ ಹೊಡೆದಾಡಿದ ಅಣ್ಣತಮ್ಮಂದಿರು ಒಂದಾಗು ತ್ತಾರಂತೆ. ಆದರೆ ನಮ್ಮ ತಂದೆಯ ಮನಸ್ಸಂತೂ ಇನ್ನೂ ಕಗ್ಗಲ್ಲಾಗಿತ್ತೆಂದು ಕಾಣುತ್ತದೆ. ಯಾರೋ ಹೋಗಿ ಬಯ್ದು ಎಳೆದುಕೊಂಡು ಬಂದು ಹಂದರದಡಿಯಲ್ಲಿ ಕುಳ್ಳಿರಿಸಿದ್ದರಂತೆ. ಸ್ವಲ್ಪ ಹೊತ್ತು ಕುಳಿತಿದ್ದು ಊಟ ಗೀಟ ಮಾಡದೆ ನಮ್ಮ ತಂದೆ ಮನೆಗೆ ಎದ್ದುಬಿಟ್ಟರಂತೆ. ಆ ಮದುವೆಯಾದ ಸುಮಾರು ಆರುತಿಂಗಳ ಮೇಲೆ ಅದು ಹೇಗೆ ಹೇಗೋ ವ್ಯಾಜ್ಯ ಮುಗಿಯಿತು.

ರಾಜಿಯಾದರು. ನಮ್ಮ ಮನೆಯುವರೂ ಗಂಗೆಯ ಮನೆಯುವರೂ ಒಂದಾದರು. ಅಷ್ಟೆ.

* * * *

ಮೊನ್ನೆ ನಡೆದ ಸಂಗತಿ. ನಾನೂ ಮದುಮಗನಾಗಿ ಮೆರೆದ ಮೇಲೆ. 'ಆಕೆ' ಯನ್ನು ನಮ್ಮೂರಿಗೆ ಕರೆದೊಯ್ದುದ್ದು ಅದೇ ಮೊದಲು. ಬಳಗದವರ ಮನೆಗಳಿಂದೆಲ್ಲಾ ಊಟಕ್ಕೆ ಕರೆ ಬರುತ್ತಿದ್ದುವು. ನಾವು ಹೋಗಿಯೂ ಬರುತ್ತಿದ್ದೆವು. 'ಆಕೆ' ಬಂದ ಸುದ್ದಿ ಗಂಗಮ್ಮನಿಗೂ ಮುಟ್ಟಿತು. ಈಗ ನನ್ನ 'ಗಂಗೆ' ಯಲ್ಲ, ಗಂಗಮ್ಮ, ಗಂಗಮ್ಮ. ಯಾರಾರನ್ನೊ ಐದಾರುಬಾರಿ ಕಳಿಸಿಸಿದ್ದಳು ನಮನ್ನು ಅವರ ಮನೆಗೆ ಕರೆದೊಯ್ಯುವುದಕ್ಕೆ. ಹೋಗುವುದು ವಿಹಿತವಲ್ಲವೇನೋ ಎಂದುಕೊಂಡು ಸುಮ್ಮನಿದ್ದೆ. ಕೊನೆಗೆ ಗಂಗಮ್ಮನ ತಾಯಿಯೇ ಬಂದು "ಯಾಕೆ ತಮ್ಮ ನಮ್ಮಮ್ಯಾಲೆ ದಯಾ ಹರೀಲಿಲ್ವಾ ನಿನಗೆ? ತಾಯಿ (ಗಂಗಮ್ಮ) ನಿನ್ನೆಯೇ ಊರಿಗೆ ಹೋಗಬೇಕಾಗಿತ್ತು ನಿಮಗಾಗಿ ಉಳಿದಿದ್ದಾಳೆ, ಬಾ ತಮ್ಮ" ಎಂದರು. ನನ್ನವಳು—ಅವಳಿಗೇನು ಗೊತ್ತು ಈ ಒಳವಿಷಯಗಳು—"ಹೋಗಿಬರೋಣ ಬನ್ನಿ, ಅವರು ಅಷ್ಟೊಂದು ಅಪೇಕ್ಷೆಪಟ್ಟು ಕರೀತಾರೆ" ಎಂದಳು. ಹೊರಡಲೇಬೇಕಾಯಿತು, ಹೊರಟೆವು.

ಗಂಗಮ್ಮ ಬಾಗಿಲಲ್ಲೇ ನಿಂತಿದ್ದಳು. ನಮಗಾಗಿ ಕಾದುಕೊಂಡು. "ದಯ ಮಾಡಿಸಿ ಶಿವಪಾರ್ವತಿಯರು" ನಾವು ಅಷ್ಟೊಂದು ಕರಸಿಕೊಂಡು ಬಂದದ್ದಕ್ಕೇನೊ.

ನಾನು ಸುಮ್ಮನಿರದೆ "ತಲೆಯ ಮೇಲೆ ಯಾರೂ ಇಲ್ಲ" ಎಂದುಬಿಡಬೇಕೆ! ಗಂಗಮ್ಮ ದುರುಗುಟ್ಟಿಕೊಂಡು ನೋಡಿದಳು. ಆಗ ನನಗೆ ಎಚ್ಚರಾಯಿತು, ಆಕೆ ಯಾರು ನಾನು ಯಾರು ಎಂಬುದು. ಒಳಗೆ ಹೋದೆವು. ಸ್ವಲ್ಪ ಹೊತ್ತು ಆ ಮಾತು ಈ ಮಾತು ಆಡುತ್ತ ಕಾಲಕಳೆದೆವು. ಊಟಕ್ಕೆ ಕರೆ ಬಂತು. ನಾವಿಬ್ಬರೂ ಊಟಕ್ಕೆ ಕುಳಿತೆವು. ಗಂಗಮ್ಮ ಬಡಿಸುತ್ತಾ

"ನಾವು ಹಳ್ಳಿಯುವರು, ಬಡವರು, ನಮ್ಮ ಅಡಿಗೆ ನಿಮಗೆ ರುಚಿಸುತ್ತೋ ಇಲ್ಲವೋ?" ಕೊರೆ ಕೊರೆ ಕೊರಗು! ಆ ಮಾತಿನಲ್ಲಿ.

ನಾನು—"ಚನ್ನಾಗಿಯೇ ಇದೆ. ನೀನ್ಮಾಡಿದ್ದು ಚನ್ನಾಗಿರೋದಿಲ್ವೇ?"

ಗಂಗಮ್ಮ—ಹೂಂ (ನಿಟ್ಟುಸಿರು)........ತೆಗೆದಿರಲ್ಲ........ಹಳೇರಾಗಾನ ........ಮೊದಲೆಲ್ಲಾ ಚೆನ್ನಾಗಿದ್ರೂ ಚನ್ನಾಗಿಲ್ಲಾಂತಿದ್ರಿ, ಈಗ ಚನ್ನಾಗಿಲ್ದೇ ಇರೋದು ಚನ್ನಾಗಿರ್ತದೆ ಅಲ್ವೇ ?"

ನಾನು—"ಇಲ್ಲಾವಮ್ಮ ಚೆನ್ನಾಗೇ ಇದೆ."

ಗಂ—"ಇಲ್ಲಾಪ್ಪ, ಚನ್ನಾಗಿದ್ರೂ, ನಮ್ಮದು ಬರಿಗೈ, ನಿಮ್ಮದು ತುಂಬಿದ ಹೊಟ್ಟೆ" ಸಂಕಟ, ಕಸಿವಿಸಿ ಆಗಿರಬೇಕು.

ನನ್ನವಳು—"ಇಲ್ಲ ನನಗೆ ಹೊಟ್ಟೆ ಹಸಿದೇ ಇದೆ."

ನಾನು "ಎಲ್ಲೋ ಇದ್ದೀಯೆ, ಏನೋ ಆಡ್ತಿ" ಎಂದೆ. ಗಂಗಮ್ಮನಿಗೆ.

ಗಂ—"ಹೌದಪ್ಪ, ಹೌದು. ನಾವು ಆಡೋದೊಂದು ಮಾಡೋದೊಂದು"

"ನಿನ್ನ ಮಾತೇ ಅರ್ಥವಾಗುವುದಿಲ್ಲ" ಎನ್ನುತ್ತ ನಾನು ಊಟ ಮಾಡಿದೆ. ಗಂಗಮ್ಮ ಆಕೆಯನ್ನು ಚನ್ನಾಗಿ ವಿಚಾರಿಸಿಕೊಂಡಳು. "ನಮ್ಮ ಮಾವನ್ನ ಚೆನ್ನಾಗಿ ನೋಡಿಕೊಳ್ಳಬೇಕಮ್ಮ" ಎಂದು ಆಕೆಗೆ ಹೇಳಿದ ಮಾತು ನನಗೂ ಕೇಳಿಸಿತು.

ಊಟವಾದ ಮೇಲೆ ನಡುಮನೆಗೆ ಬಂದು ಕುಳಿತೆವು, ಹಸೆಯಂತೆ ಹಾಸಿದ್ದ ಹಾಸಿಗೆಯ ಮೇಲೆ, ದಿಂಬಿಗೆ ಒರಗಿಕೊಂಡು, ಗಂಗೆಯ ತಾಯಿ ಮಗನಿಗಾಗಿ ಕನ್ನೆಯನ್ನು ಪರೀಕ್ಷಿಸುವಂತೆ 'ಆಕೆ' ಯನ್ನು ಕಣ್ಣಿನಲ್ಲಿ ಕಣ್ಣಿಟ್ಟು 'ಮರ್ಮ' ದಿಂದ ನೋಡುತ್ತಿದ್ದಳು. ತಾಂಬೂಲ ಸವಿಯುತ್ತ ಸ್ವಲ್ಪ ಹರಟೆ ಹೊಡೆದೆವು. ನಗುವು ನಲಿವಂತೂ ಅಲ್ಲಿರಲಿಲ್ಲ. ನಾವು ಹೊರಡಬೇಕು, ಗಂಗಮ್ಮ ಆಕೆಗೆ ಕುಂಕುಮವಿಟ್ಟು ಹೂಮುಡಿಸಿದಳು. ಗಂಗಮ್ಮನ ಕಣ್ಣುಗಳಲ್ಲಿ ಖುಡುಗ ದುಃಖ ಮನೆ ಮಾಡಿಕೊಂಡಿತ್ತು ಆದರೂ ಒಂದು ಹನಿಯೂ ಬೀಳಲಿಲ್ಲ ನಮ್ಮೆದುರಿಗೆ. ಅದನ್ನು ನೋಡಿ ನನಗೂ ತಡೆಯುವುದಕ್ಕಾಗಲಿಲ್ಲ—ನಕ್ಕುಬಿಟ್ಟೆ ಚನ್ನಾಗಿ. ಗಂಗಮ್ಮನ ತಾಯಿ, ಪಾಪ, "ಯಾಕಪ್ಪಾ ತೀರ್ಥ ನಗುತ್ತೀ, ನಾವು ಹಳ್ಳಿಯವರು, ಓದುಬರಹ ಬಾರದವರು, ಸರಿಯಾಗಿ, ಹೂಮುಡಿಸೋದಕ್ಕೂ ಬರೋದಿಲ್ಲ, ಕುಂಕುಮ ಇಟ್ಟೋರೇ ಅಲ್ಲ... ....ಅದೃಷ್ಟವಿಲ್ಲ" ಎನ್ನುತ್ತ ಉಸುರ್ಗರೆದರು. ಆಮೇಲೆ ಸ್ವಲ್ಪಹೊತ್ತು ಮೌನ........ ಅನಂತರ ಹೊರಡಲನುವಾದೆವು. ಆಗಲೇ ಗಂಗಮ್ಮನಿಗೂ ನನ್ನವಳಿಗೂ ಕಿತ್ತಾಟ ಪ್ರಾರಂಭವಾಯ್ತು. "ನಾನು ನಿಮಗೆ ನಮಸ್ಕಾರ ಮಾಡಬೇಕು,

ನಿಮಗೆ ನಾನು ನಮಸ್ಕಾರಮಾಡಬೇಕು" ಎಂದು. **ಶೀರ್ವಾನ ಹೇಳಿದೆ** ನನ್ನವಳೇ ನಮಸ್ಕಾರ ಮಾಡಬೇಕೆಂದು. ಮಾಡಿದಳು. ಗಂಗಮ್ಮ "ನಿಮ್ಮ ಹಂಗೇಕೆ" ಎನ್ನುವಳಂತೆ ನನ್ನೆಡೆಗೆ ಮುಗ್ಗುರಿಸಿ ಬೀಳುವಳಂತೆ ಧಾವಿಸಿ ಬಂದು ನನಗೆ ನಮಸ್ಕಾರ ಮಾಡಿದಳು; ಅಲ್ಲ, ಅಲ್ಲ, ತನ್ನ ಕಣ್ಣೀರಿನಿಂದ ತನ್ನ ಪಾದ ಗಳಿಗೆ ಅಭಿಷೇಕಮಾಡಿದಳು. ನನ್ನ ಸ್ಥಿತಿ! ವೈರಿಗೂ ಬೇಡ ಎನ್ನಿಸಿತು. ಮನೆ ಬಿಟ್ಟು ಬರುವಾಗ ಗಂಗಮ್ಮನ ತಾಯಿ

"ಮರೆಯಬೇಡಿ ಬಡವರನ್ನು" ಸೊರಗಿದರು.

ನಾನು—"ಛೆ! ಎಂಥ ಮಾತು. ಮರೆಯುವುದಕ್ಕಾಗುತ್ತದೆಯೆ?"

ಗಂಗಮ್ಮ—"ಅಯ್ಯೋ ನಿಮಗೆಲ್ಲಿ ನೆನಪಿರುತ್ತದೆ" ಎಂದು ಅಳಲಿದಳು ಒಳಗಿನಿಂದ ಅಳು ದನಿಯಲ್ಲಿ.

# ವಧುವಲ್ಲ, ವಿಧವೆ

ಯುಗಾದಿಯದಿನ ನಮ್ಮ ಹೊನ್ನೂರಿಗೆ ಹೋಗಿ ನೋಡಿ, ಆವಾಗ ಗೊತ್ತಾಗುತ್ತದೆ ಹಳ್ಳಿಯ ಹಬ್ಬದ ಗಮ್ಮತ್ತು, ಕಿಮ್ಮತ್ತು. ಅದು ಊರಲ್ಲ, ನೂರಾರು ಮನೆಗಳ ಒಂದು ಕುಟುಂಬ. ಆದರೆ ನಾನು ಹೇಳುವುದು ಯಾವ ಒಂದು ಹಬ್ಬದ ಕಥೆಯೂ ಅಲ್ಲ. ಹಬ್ಬವನ್ನು ಸಂಪೂರ್ಣ ಹೋಲುವ, ಇನ್ನೂ ಮೀರಿಸುವ ಒಂದು ಸಂದರ್ಭವದು.

ಅಂದು ಊರೆಲ್ಲ ಗದ್ದಲ, ಗುಜುಗುಜು, ಕಲಕಲ. ಮೊದಲೇ ತುಂಬಿದ ಊರು, ಒಂದು ಪಿಳ್ಳೆಯೂ ಊರುಬಿಟ್ಟು ಕದಲಿಲ್ಲ, ಊರ ಬೀಗರು ಬೇರೆ ಬಂದಿದ್ದಾರೆ. ಇಷ್ಟಾದರೂ ಗೌಡರ ಮನೆ ಒಂದು ಬಿಟ್ಟು ಇನ್ನು ಯಾರ ಮನೆಯ ಒಲೆಯೂ ಬೆಂಕಿಯನ್ನು ಕಾಣಲಿಲ್ಲ. ಜನರೆಲ್ಲಾ ಊರಲ್ಲಿದ್ದ ಮೇಲೆ ದನಕರುಗಳೇನು ಮಾಡಿಯಾವು? ಅವಕ್ಕೂ ರಜಾ, ಮತ್ತು ಜೀತ ದಾಳುಗಳಿಗೆ.

ಗಿರಿಯಯ್ಯಗೌಡರ ಮನೆಯ ಮದುವೆಯ ಹಸಿರುವಾಣಿ ಹಂದರಕ್ಕೆ ತಳಿರುತೆತ್ತು ಊರ ತೋಟಗಳಲ್ಲಿದ್ದ ಮಾವಿನಮರಗಳೆಲ್ಲ ಆ ವಸಂತಋತು ವಿನಲ್ಲಿಯೂ ಬಡಕಲಾದುವು. ಅಗಸನ ಮನೆಯ ಮಡಿಗಳು ಅರಸಿನ ಹಚ್ಚಿ ಕೊಂಡುಬಂದು ಮದುವೆ ಚಪ್ಪರಕ್ಕೆ 'ಹಡದಿ' ಯಾದುವು ಹಂದರದ ಕಂಬಗಳು ಸಹ ಆ ಜನರ ಮನಸ್ಸಿನಂತೆ ರಂಗುರಂಗಾದುವು. ಹೆಣ್ಣುಮಕ್ಕಳ ಬಣ್ಣಬಣ್ಣದ ಸೀರೆ ಕುಪ್ಪಸಗಳು ಅದೇ ಬೆಳಕನ್ನು ಕಂಡಿದ್ದು. ಬಣ್ಣದ ಒಲ್ಲಿ ಬುಗುಡಿ ಅಂಚಿನ ಪಂಚೆ, 'ಉಲನ್' ಕೋಟುಗಳು ಆಗತಾನೆ ಪಿಟಾರಿಯಿಂದ ಹೊರಬಿದ್ದು ಕೋರು ಹುಡುಗರನ್ನು ಅಲಂಕರಿಸಿದ್ದುವು. ಊರಬಣಕಾರ, ಬುದ್ಧಿವಂತ, ತಳವಾರ, ಅಗಸ, ಅಕ್ಕಸಾಲೆ, ಮುತ್ತೈದೆಯರಿಗೆ ತಾಂಬೂಲದ ಪರ್ವ.

ಹೀಗೆ ಊರಿಗೂರೇ ಸಿಂಗಾರವಾಗಿ ಕಿಲಕಿಲನೆ ನಗುತ್ತಿದೆ. ಗಿರಿಯಯ್ಯನ ಏಕಮಾತ್ರ ಪುತ್ರಿ ಗೌರಮ್ಮನ ಆನಂದ ಇಷ್ಟೇದು ಹೇಳಲು ಸಾಧ್ಯವಿಲ್ಲ; ತನ್ನ ಭಾಗ್ಯದೇವತೆಯ ಕೈ ಹಿಡಿಯುವೆನೆಂದು ಹಿರಿಹಿರಿ ಹಿಗ್ಗಿದಳು. ಮಲ್ಲೂರು ಬಣಕಾರ ಬಸವಯ್ಯನ ಮಗ ಪುಟ್ಟಯ್ಯನೇ 'ಮದುಮಗ'

ಗಂಡಿನ ಕಡೆಯುವರೂ ಹೆಣ್ಣಿನ ಕಡೆಯುವರೂ ಪುರಾತನ ಮನೆತನದವರು, ಪಾಳೆಗಾರರ ವಂಶಕ್ಕೆ ಸೇರಿದವರಂತೆ, ಇವೊತ್ತಿಗೂ ನೂರಾರು ಮಂದಿಗೆ ಬೇಕಾದವರು. ತಮ್ಮ ಹಿರಿಯರು ಗಳಿಸಿದ್ದ ಕೀರ್ತಿಗೌರವಗಳನ್ನು ಇಂದೂ ಕಾಪಾಡಿಕೊಂಡು ಬಂದಿದ್ದಾರೆ. ಹೊನ್ನೂರಿನ ಮಾತಿರಲಿ, ಸುತ್ತಮುತ್ತಲ ಹಳ್ಳಿಗಳಲ್ಲಿ ಮದುವೆ, ಗೃಹಪ್ರವೇಶ, ಆರಾಧನೆ ಮುಂತಾದ ದೊಡ್ಡ 'ಕಾರ್ಯ'ಗಳು ನಡೆಯುವಾಗ ಅಲ್ಲಿ ಗಿರಿಯಯ್ಯ ನಿಲ್ಲಿದಿದ್ದರೆ ಜನಗಳಿಗೆ ಏನನ್ನೋ ಕಳೆದುಕೊಂಡಂತೆ; ಮನಸ್ಸಿಗೆ ನೆಮ್ಮದಿ ಇರದು. ಹೊನ್ನೂರಿನಲ್ಲೋ ತೇರುಮಾಡುವಾಗ ಗಿರಿಯಯ್ಯನೇ ತಲೆಯಾಳು; ದೇವರು ಹೊರಡಿಸುವುದಕ್ಕೆ ಅವನೇ ಬರಬೇಕು; ಹೆಣ್ಣು ತರುವಳಿ ಕೊಡುವಳಿಗೆ ಅವನ ಒಪ್ಪಿಗೆ ದೊರೆಯಬೇಕು; ಜನ ದಾಗ್‌ದೊರೆಗಳ ಬಳಿಗೆ ಹೋಗಬೇಕಾದರೆ ಅವನನ್ನು ಮುಂದಿಟ್ಟುಕೊಂಡೇ ಹೋಗಬೇಕು; ಆಕಳು ಬೆದೆಯೆದ್ದಾಗ ಹೋರಿ ಬಿಡಿಸುವಾಗಲೂ ಅವನಿರಬೇಕು.

ಹೊನ್ನೂರಿಗೆ ಗಿರಿಯಯ್ಯನಾದರೆ ಮಲ್ಲೂರಿಗೆ ಬಸವಯ್ಯ. ಇಂತಹ ಎರಡು ದೊಡ್ಡ ಮನೆತನಗಳ ನಂಟು ಬೆಳೆದುದು ಆ ಗಡಿವಾಡದ ಜನರಿಗೆಲ್ಲಾ ಸಂತೋಷ. ಸುತ್ತಮುತ್ತಿನ ಹಳ್ಳಿಗಳಿಂದೆಲ್ಲ ಜನ ಬಂದಿದ್ದರು; ನೋಡುವುದಕ್ಕೆ ಮಾತ್ರ ಅಲ್ಲ, ಕೆಲಸ ಮಾಡುವುದಕ್ಕೂ. ಹೊನ್ನೂರು ಮಲ್ಲೂರಿನವರಂತೂ ಟೊಂಕಕಟ್ಟಿ ನಿಂತಿದ್ದರು.

ಹೊಸ ಜೋಡಿಗಳ ಬಗ್ಗೆ ಜನರ ಅಭಿಪ್ರಾಯ ತಿಳಿಯಬೇಕೆಂದು ಬಯಸುವವರು ಬಾವಿಯಬಳಿ ಓಡಬೇಕು, ಹೆಣ್ಣುಮಕ್ಕಳ ಟೀಕೆ ಕೇಳಬೇಕು. ಹಿರಿಯ ಮುತ್ತೈದೆಯೊಬ್ಬಳು 'ಕಾಮನಂತ ಗಂಡು ರತೀದೇವಿಯಂತ ಹೆಣ್ಣು, ಇಬ್ಬರಿಗೂ ಒಳ್ಳೆವರ' ಎಂದರು. ಇನ್ನೊಬ್ಬಳು ಮುಟ್ಟಲು ಮರುಕಿ ಮೂತಿ ತಿರುಹುತ್ತ "ಅಯ್ಯೊ ಬಿಡ್ನಮ್ಮವ್ವ ಏನ್ಹೇಳ್ತಿ" ಎಂದಾಗ ಮತ್ತೊಬ್ಬಳು "ಒಬ್ಬರನ್ನೊಬ್ಬರು ಮೆಚ್ಚಿ ಆಗೊ ಮದುವೆ ಕಣೇ ಗಂಗತ್ತಿ ಅದು!" ಎಂದಳು ಆ ಹಿರಿಯ ಮುತ್ತೈದೆಯನ್ನು ಕುರಿತು. ಮೆಚ್ಚೋ ಗಿಚ್ಚೋ ಹೇಳುವುದಕ್ಕಾಗುವುದಿಲ್ಲ. ಆಯ್ದಾರು ತಿಂಗಳ ಹಿಂದಿನ ಮಾತು: ಗೌರಮ್ಮನೇನೋ ಮಲ್ಲೂರಿಗೆ ಹೋಗಿದ್ದಳಂತೆ, ಯಾರದೋ ಮದುವೆಗೆ. ಆವಾಗಿನಿಂದ ಹೊನ್ನೂರ ವಿಷಯ ಎತ್ತಿದರೆ ಪುಟ್ಟಯ್ಯನ ಕಿವಿ ನೆಟ್ಟಗಾಗುತ್ತಿದ್ದುವು. ಮಲ್ಲೂರು ಹೆಸರೆತ್ತಿದ

ಕೂಡಲೆ ಗೌರಿಯ ಕೆನ್ನೆ ಕೆಂಚಗಾಗುತ್ತಿದ್ದುವಂತೆ. ಇವರ ಆಸೆಗನುಗುಣವಾಗಿ ಹಿರಿಯರ ಮನಸ್ಸುಗಳೂ ತಾಳಿ, ಹೊಂದಿಕೊಂಡಿದ್ದುವು, ರೊಟ್ಟಿಜಾರಿ ತುಪ್ಪಕ್ಕೆ ಬಿದ್ದಿತ್ತು.

ಧಾರೆಯೆರೆಯುವ ಗಳಿಗೆ ಅದು. ಆ ಸಮಯಕ್ಕೇ ಪ್ರಾಶಸ್ತ್ಯವಷ್ಟೆ. ನಂಟರಿಷ್ಟರ ಸಡಗರ, ಸಣ್ಣಮಕ್ಕಳ ಜಾತ್ರೆ ಇವನ್ನು ನೋಡುವುದಕ್ಕೆ ಎರಡು ಕಣ್ಣೂ ಸಾಲವು! ಇನ್ನೇನು ಸೊಸೆಯಮೇಲೆ ಅಧಿಕಾರ ನಡೆಸುತ್ತ ಹಾಯಾಗಿ ಕಾಲಹಾಕಬಹುದೆಂಬ ಗಂಡಿನ ತಾಯಿಯ ಬಿಂಕವನ್ನೂ ನನ್ನ ಮಗಳಿಗೆ ಮುತ್ತಿನಂಥ ವರ ಸಿಕ್ಕಿತೆಂದು ಬಿಗುಮಾನದಿಂದ ತಿರುಗಾಡುತ್ತಿರುವ ಬೀಗಿತಿಯನ್ನೂ ಕಣ್ಣಾರೆ ನೋಡಿ ಆನಂದಪಡಬೇಕು. ಆ ಶಾಸ್ತ್ರ ಮೊದಲು ಆಗಬೇಕು, ಈ ಶಾಸ್ತ್ರ ಮೊದಲು ಆಗಬೇಕು ಅವರ ಮದುವೆಯಲ್ಲಿ ಹಾಗೆ ಮಾಡಿತ್ತು ಇವರ ಮದುವೆಯಲ್ಲಿ ಹೀಗೆ ಮಾಡಿತ್ತು, ನಿಮಗೆ 'ಕಾರ್ಯ' ಮಾಡುವುದಕ್ಕೇ ಬರುವುದಿಲ್ಲ ಎಂದು ಮುಂತಾಗಿ ಪುರೋಹಿತ ಶಾಸ್ತ್ರಿಗಳಿಗೇ ಮಿಲಾಯಿಸುತ್ತಿರುವ ಮುತ್ತೈದೆಯರನ್ನು ಚಿತ್ರಿಸುವುದಕ್ಕಂತೂ ಆ ಆದಿಶೇಷನೇ ಬರಬೇಕು. ಅವರು ಇನ್ನೂ ಚಿಕ್ಕ ವಯಸ್ಸಿನವರಾಗಿದ್ದರಂತೂ ಯಾರಾದರೂ ಅರಿಯದವರು "ಇದೇನು ಈ ಮೊದಲಿಂಗಿತ್ತಿಗೆ ನಾಚಿಕೆ ಅನ್ನೋದೇ ಇಲ್ಲ, ಕಂಡಾಬಟ್ಟೆ ತಿರುಗುತ್ತಿದ್ದಾಳೆ" ಎಂದು ಕೊಂಡಾರು. ತಕ್ಕ ಮಟ್ಟಿಗೆ ವಯಸ್ಸಾದ ಐದೆಯರಾದರೆ ಅವರೇ ಬೀಗಿತಿಯರು! ಎಲ್ಲಾ ವಹಿವಾಟೂ ಅವರದೇ; ಕೆಲಸ ಮಾಡುವವರ ಮೇಲೆ ರೇಗಿ ರೇಗಿ ತಮ್ಮ ಅಧಿಕಾರ ನಡೆಸುತ್ತಾರೆ. ಈ ಮುತ್ತೈದೆ ದಿಗ್ದರ್ಶಕಿಯರ ಕೈಗೊಂಬೆಗಳು ಶಾಸ್ತ್ರಿಗಳು. ಇಲ್ಲದಿದ್ದರೆ ಅವರಿಗೆ ಸಂಭಾವನೆ ಸೊನ್ನೆಯಲ್ಲ! ನಮ್ಮ ಪುಟ್ಟಯ್ಯನ ಮದುವೆ ಈ ಸಂಪ್ರದಾಯಗಳಿಗೆಲ್ಲಾ ಹೊರತಾಗಿ 'ಚಂಡಾಳಿ' ಎನ್ನಿಸಿ ಕೊಂಡೀತೆ!

ಧಾರೆಯನ್ನು ನೋಡುವುದಕ್ಕೆ ನೂರಾರು ಮಂದಿ ಸೇರಿದ್ದರು, ವಧೂವರರನ್ನು ಹರಸುವುದಕ್ಕೆ ಆ ಗಡಿವಾಡಿದ ಜನರೆಲ್ಲಾ ಬಂದಿದ್ದರು. ಹೆಂಗಸರ ಹಿಂಡೊಂದು ಕಡೆ, ಗಂಡಸರ ದಂಡೊಂದು ಕಡೆ, ಎಲ್ಲಾ ಕಡೆಯೂ ಮಕ್ಕಳ ಝೊಂಡ. ಹೆಂಗಸರ ಗುಂಪಿನಲ್ಲಿ "ಗುಸುಗುಸು ಗುಜುಗುಜು". ನೆರೆಮನೆಯ ಗೋಟು ಮುದುಕಿಯೊಬ್ಬಳು ಒಳಗಿನಿಂದ ಬಂದು ಹೆಂಗಸರ ನಡುವೆ ಕುಳಿತು "ಮೊದಲಿಗಿಂತ್ತಿ ನೋಡಾನಾ ಅಂತ ಒಳಗೆ ಹೋಗಿದ್ನೆವ್ವ, ಇದೇನ್ರೆ! ಹುಡುಗಿಗೆ

ಸರಿಯಾಗಿ ನೆಗಗಳ್ನೇ ಹಾಕಿಲ್ಲ. ಈಗ ಅವನ್ನೆಲ್ಲಾ ಯಾರಿಟ್ಟುಕೋತಾರೆ ಅನ್ನೋದೊಂದು ನೆವ! ಇವರು ತರೋಹಾಂಗೆ ನೆಗಗಳ್ನ ತಂದಿಡಾನ. ವಾಲೆ, ರಾಗಟೆ, ಚೌಲಿ, ತಲೆಯಾಗ್ನೋವು, ಹರಡಿ, ದ್ವಾರೇವು, ಕಾಲ್ತುಂಬ ಪಿಲ್ಲಿ, ನಾಗರ, ಇವಾದರೂ ಬ್ಯಾಡವಾ ?"

ಇನ್ನೊಂದು ಮುದುಕಿ "ನಾನಾದಾಗ ಹಿಂಗಿರಲಿಲ್ರವ್ವ, ಎಲ್ಲಾ ನೆಗಾನೂ ತಂದ್ಕೊಟ್ಟ ವ್ಯಾಲೇ ನಮ್ಮವ್ವ ನನ್ನ ದಾರಿಗೆ ಬಿಟ್ಲು" ಎಂದಳು.

ಇನ್ನೊಬ್ಬಳು ಅದೇ ಹೊತ್ತಿಗೆ ಬಂದು ಬಿಟ್ಟು, "ಸೀರೇ ಅನ್ನೋದು ಹಾಳು ಸುರಿತೈತೆ, ಯಾವ ಮತಿಗೇಡಿ ಮುಕ್ಕಗಳು ಕೊಂಡ್ರವ್ವ ಆ ಸೀರೇನ! ಜವಳಿ ಕೊಳ್ಳಾಕೆ ತಿಳಿದೋರ್ನ ಕರ್ಕೊಂಡು ಹೋಗಿದ್ರೆ ಹಿಂಗೆಲ್ಲಾ ಯಾಕೆ ಆಗ್ತಿತ್ತು" ಮೂತಿ ತಿರುವಿದಳು.

"ಹೆಣ್ಣು ಗಂಡು ಒಂದಾಗ್ಬಿಟ್ಟಿದಾವಂತೆ ಕಣ್ರೇ! ಏನೂ ತಕರಾರು ನಡೆಯಂಗಿಲ್ಲ" ಗುಸುಗುಟ್ಟಿದವಳೊಬ್ಬ ಬಿಡಕಿ.

ಅಲ್ಲಿಯೇ ಕುಳಿತಿದ್ದ ಒಂದು ಹುಡುಗಿ ಇವರ ಮಾತನ್ನೆಲ್ಲಾ ಆಲಿಸಿ, "ನಮ್ಮ ಅಣ್ಣಯ್ಯನ ಕೈಹಿಡಿಯೋ ಪುಣ್ಯವಂತೆಗೆ ಚಿನ್ನಬಣ್ಣ ಬೇರೆ ಬೇಕೇನೋ" ಸಿಡುಕಿದಳು, ಮೂತಿಮುರಿದು.

"ಬಿಟ್ಟೆ ಬಂದಿದಾಳೇನೇ" ಎಂದಳು ವಧುವಿನ ಚಿಕ್ಕಮ್ಮ.

"ಎದುರುಗೊಂಡಾಗ ಬೀಗರ್ನ ಆಡಿಕೊಳ್ಳೋದಕ್ಕೆ ಪದಕಟ್ಟಿ ಹಾಡಿದಿರಲ್ಲಾ, ಆ ಪದವೇ ತೋರಿಸ್ತೈತೆ ನಿಮ್ಮ ಹಿರೇತನಾನ" ವರನ ಸೋದರತ್ತೆ ಹೀಗೆಂದಳು.

ವಧುವಿನ ತಂದೆಯ ತಂಗಿಯ ನಾದಿನಿ ಗೊಣಗಿದಳು: "ಆಯ್ಯೋ, ಕಾಲ್ಕೆರದೇ ನ್ಯಾಯ (ಜಗಳ) ತಗೀತೀರವ್ವ, ಒಂದಿಷ್ಟು ಕಾರ್ಯಮಾಡಾಕೆ ಬರದಿದ್ದರೂ. ನಮ್ಮಕ್ಕನ ಮಗಳ್ನ ಯಾರೂ ಒಯ್ಯೋರಿರಲಿಲ್ವಾ? ಮೈ ಮೇಲೆ ಒಂದುರವೆ ಚಿನ್ನವೂ ಇಲ್ಲ."

"ತಂದಿಟ್ಟಿರೋ ನೆಗಗಳೆಲ್ಲಾ ನಿಮ್ಮಪ್ಪನ ಮನೇವೇನೇ, ನಮ್ಹುಡುಗನ್ನ ಯಾರ್ಮನೇಲಾದರೂ ಸಂಬಳ ಇಡಾನೇನೇ" ವರನ ಚಿಕ್ಕಮ್ಮನ ಸೊಸೆಯ ತಂಗಿ ಚೀರಿದಳು.

"ಏನೇ ತಾನೇ ಅಂತೀಯೇನೇ ಗಯ್ಯಾಳೀ."

ವಧುವಿನ ಕಡೆಯ ಸ್ತ್ರೀ ಸೈನ್ಯವೆಲ್ಲಾ ಒಂದೇ ಬಾರಿಗೆ ಛೀಳಿಟ್ಟಿತು. ಸರಿ, ಎರಡು ಗುಂಪಿನವರಿಗೂ ವಾಗ್ವಾದ ಬಲವಾಗಿಯೇ ಬಿಟ್ಟಿತು. ರಣ ಕೋಲಾಹಲ! ಎರಡು ಗುಂಪಿನವರೂ ಬಾಯಿಗೆ ಬಂದಹಾಗೆ ಅನ್ನಹತ್ತಿದರು. ಯಾರು ಏನೆಂದರು, ಏನೆನ್ನುತ್ತಿದಾರೆ, ಇದಕ್ಕೆಲ್ಲ ಕಿವಿಗೊಡುವರಾರು? ಎದುರು ಪಕ್ಷದವರ ವಾದವನ್ನು ಕೇಳುವುದಕ್ಕೆ ಸಮಯವೆಲ್ಲಿ? ಇವರ ಬೈಗುಳು ಅವರ ಶರೀರವನ್ನು ಕೊರೆದು ಹೋಗುವುದಷ್ಟೇ ಉದ್ದೇಶ. ಇನ್ನೇನು ರಣಕಹಳೆ ಊದುವುದೊಂದು ಉಳಿದಿತ್ತು, ಕೈಕೈ ಮಿಲಾವಣೆಯಾಗುವುದಕ್ಕೆ. ಅಷ್ಟುಹೊತ್ತಿಗೆ ಬೀಗತಿಯರು—ವಧೂವರರ ತಾಯಿಯರು—ಬಂದು ಎರಡೂ ಕಡೆಯ ಪಡೆಗೂ ಬಯ್ದು ಸುಮ್ಮನಿರಿಸಿ 'ಯಾರಾದರೂ ಒಂದು ಪದಾನಾದರೂ ಹೇಳ್ರಿ, ಮೊದಲಿಂಗಿತ್ತಿ ಸಿಂಗಾರ ಇನ್ನೂ ಮುಗಿದಿಲ್ಲ' ಎಂದು ಹೇಳಿ ಒಳಗೆ ಹೋದರು. ವಧುವಿನ ಮೈ ಮೇಲೆನೂ ಕಡಮೆ ನೆಗಗಳಿರಲಿಲ್ಲ. ಆದರೂ ಮದುವೆಯ ವೇಳಾ ಪತ್ರಿಕೆಯಲ್ಲಿ ಜಗಳಕ್ಕೂ ಸ್ಥಾನ ಕೊಡಲೇಬೇಕು.

ಬೀಗುತಿಯರ ಮಾತಿಗೆ ಬೆಲೆಕೊಟ್ಟು ಸೋಬಾನೆ ಕೇಳುವುದಕ್ಕೆ ಹೆಂಗಸರು ಅಣಿಯಾದರು. ಅಲ್ಲಿದ್ದವರಲ್ಲಿ ಅನೇಕರು ಸೋಬಾನದಲ್ಲಿ ಪದವೀಧರೆಯರು. ಆದರೂ ಯಾರೂ ಬಾಯಿಬಿಡಲೊಲ್ಲರು! 'ನೀನುಹೇಳೆ,' 'ನೀನುಹೇಳೆ' ಎಂದೇ ಹಾಡಹತ್ತಿದರು. ಕೊನೆಗೆ ಪದಹೇಳುವುದಕ್ಕಾಗಿಯೇ ಬೀಗುತಿಯಿಂದ ಆಹ್ವಾನಿತಳಾಗಿದ್ದ ಕೆಂಚಿ ಮುಂದೆಬಂದು ಹಾಡಲು ಸಜ್ಜಾಗಿ ಕುಳಿತಳು. ಅಲ್ಲಿದ್ದ ಇನ್ನೊಬ್ಬ ಪದಗಾರ್ತಿ—

"ಶಾಸ್ತ್ರಮಾಡೋವಾಗ ಪದಾ ಹೇಳಾನವ್ವ, ಈಗ ಯಾವ ಶಾಸ್ತ್ರ ನಡೀತದೆ, ಸಾಕು ಸುಮ್ನಿರು" ಎಂದು ಕೆಂಚಿಯ ಬಾಯಮೇಲೆ ಹೊಡೆದಳು.

ಪದ ಹೇಳುವವಳ ಬಾಯಿಗೆ ಬೀಗಬಿತ್ತು. ಅಲ್ಲಿಯೇ ಇದ್ದ ಇನ್ನೊಂದು ಹುಡುಗಿ—ಅವಳು ಈ ಕಾಲದವಳು ಒಂದೆರಡು ಸಾರಿ ಸಿನೇಮಾ ನಾಟಕ ನೋಡಿದವಳು—ತಾನೇ ಮುಂದೆಬಂದು ಶಾಸ್ತ್ರದ ಪದ ಬ್ಯಾಡ, ಬೇರೆ ಪದ ಹೇಳ್ತೇನೆ ಎಂದವಳೇ—

"ಹಾ ಪ್ರಿಯಾ ಪ್ರಶಾಂತ ಹೃದಯಾ ಹಾನಿಪೊಂದಿದೆಯಾ, ಪ್ರಿಯಾ" ಬಾಯಿತೆರೆದಳು, ರಾಗ ಎಳೆದಳು. ಸೋಬಾನೆ ಪದದ ಗುಂಪಿಗೆ ಇದು ಸರಿ ಹೋಗಲಿಲ್ಲ. "ಸಾಕುಬಿಡೆ ನಿನ್ನ 'ಹಾ ಪಿರ್ಯ', ಕೆಂಚಿ, ನೀನೇ ಹೇಳೆ" ಎಂದು

ಕೆಂಚಿಯನ್ನು ಎಬ್ಬಿಸಿದರು. ಕೆಂಚಿ ತನ್ನ ಬಲದ ಪಾದದ ಮೇಲೆ ಎಡ ಪಾದ ವನ್ನೂರಿ ಎಡ ಮೊಳಕಾಲ ಮೇಲೆ ತನ್ನ ಮುಖವನ್ನು ಹೇರಿ 'ಸೋ' ಷುರುಮಾಡಿದಳು. 'ಸೋಬಾನವೇನ್ನಿರಿ ಸೋಬಾನವೇನ್ನಿರಿ, ಸೋಬಾನ ವೆನ್ನಿ, ಶಿವನೆನ್ನೀ ಸೋಬಾನಾವೇ' ಎಂದು. ಹಿಮ್ಮೇಳದವರೇ ಮುಂದೆ ಬರ ಲಿಲ್ಲಿ. ನೀನು ಬಾರೇ, ನೀನು ಬಾರೇ ಎನ್ನುವಷ್ಟರೊಳಗೆ "ಸಾಕುಬಿಡ್ರೀ! ಮದಮಗಳ ಸಿಂಗಾರ ಮುಗೀತು" ಎನ್ನುವುದೇ ಕೇಳಿಸಿತು. ಎಲ್ಲರೂ ಸುಮ್ಮನಾದರು.

ಹೊರಗಡೆ ಹಂದರದಲ್ಲಿ ಗೌಡರು, ಬುದ್ಧಿವಂತರು, ಬಣಕಾರರು, ಮಠಸ್ಥರು ಬಂದು ಧಾರೆಗೆ ಅಪ್ಪಣೆ ಕೊಡುವುದಕ್ಕೆ ಅನುವಾಗಿ ಕುಳಿತಿದ್ದಾರೆ. ಹನ್ನೆರಡು ಕಸಬಿನವರೂ ತಮ್ಮತಮ್ಮ ಬಾಬಿಗಾಗಿ ಹೊರಗಡೆ ಕಾದಿರುವರು. 'ವ್ಯಾಳ್ಯ ಆತು ಕರ್ಕೊಂಬರ್ರವ್ವ ಮದಮಗಳ್ನ' ಕೂಗಿದರು ಜನ.

ಬಣಕಾರ ಬಸವಲಿಂಗಪ್ಪನವರು, 'ಅಯ್ಯೋ ಬುಡಪ್ಪಾ, ಶಾಸ್ತ್ರ ಹೇಳಾಕೆ ಬಾನ ಉಣ್ಣಾಕೆ, ಹೊತ್ತಾದರೇನಾತು? ಚಿನ್ನ ಬಣ್ಣ ಇಟ್ಕೊಂಡು ನಿದಾನವಾಗಿ ಕರ್ಕೊಂಬರ್ಲಿ' ಎನ್ನುತ್ತ ಸೊಂಟದಿಂದ ನಸ್ಯಡಬ್ಬಿ ಹೊರ ತೆಗೆದರು.

ಅಗಸರ ಕರಿಯ—"ದೊಡ್ಡೋರ ಮದುವೆ, ಎಲ್ಲಾ ತಾರ್ಕಣ್ಣೇವಾಗ ಬೇಕೆಲ್ಲಾ."

ಕಾರ್ಯಸ್ಥ ಬಂದವರಿಗೆಲ್ಲಾ ತಾಂಬೂಲ ಅರ್ಪಿಸುತ್ತಾ "ಇನ್ನೇನು ಕರಕೊಂಬಂದರು ನೀವೆಲ್ಲಾ ಎಲೆ ಅಡಕೆ ಹಾಕ್ಕೊಳ್ಳೋ ಹೊತ್ತಿಗೆ" ಎಂದ.

ಜನಜಾತ್ರೆ ವಧುವಿನ ಬರವಿಗಾಗಿ ಕಾದಿತ್ತು. ಬಣಕಾರರು ಇನ್ನೊಂದು ಸಲ ಗಡಕುಹಾಕಿ ಎಲೆ ಅಡಕೆ ತಂಬಾಕಿನ ಹಿಂಡಿಯನ್ನು ಹೊರಗೆ ಉಗುಳಿ, ಮತ್ತೆ ಕೊಟ್ಟವನ್ನೂ ತಂಬಾಕಿನ ಕಡ್ಡಿಪುಡಿಯನ್ನೂ ಅಣಿಮಾಡಿದರು, ಇನ್ನೊಂದುಬಾರಿ ತಾಂಬೂಲ ಮೆಲ್ಲುವುದಕ್ಕೆ.

ಜನರ ಗುಂಪಿನಲ್ಲಿ ಕುಳಿತಿದ್ದ ವರನ ತಂದೆ ಬಸವಯ್ಯನ ಮುಖ ವಾಗಲೇ ಉಗ್ರವಾಗಿತ್ತು. ಕಣ್ಣು ಕೆಂಡಕಾರುತ್ತಿದ್ದುವು.

"ಹೊನ್ನೂರೋರಿಗೆ ಬುದ್ದ್ಯೈತೆ ಅಂತ ಯಾರು ಹೋಳ್ತಾರೆ, ಮೂರ್ತ ಗೀರ್ತ ನೋಡೋದೇ ಬ್ಯಾಡವಾ? ನನ್ನೂರಿಗೆ ಬರಲಿ, ಇವರ ಕಾರ್ಯ ಹೆಂಗೆ ತೂಗಿಸಿ ಕಳಿಸ್ತೇನೋ ನೋಡಲಿ; ಊರ ತಾಯಂತೆ ಮತ್ತೆ, ಊರತಾಯಿ!"

ಅಲ್ಲಿಯೇ ಇದ್ದ ಬೀಗ. ಅವನಿಗೂ ನಾಚಿಕೆ, ಬೀಗ ಬಯ್ದನಲ್ಲಾ ಅಂತ ಖುಷಿ!

"ಬೀಗರು ಅನ್ನೋದು ಕೇಳಿಸ್ತತೋ ಇಲ್ರಲೇ, ಹೋಗಿ ಬಡಬಡ ಬೇರ್ಮನೆ (ವರನಿರುವ ಮನೆ) ಯಿಂದ ಮದಲಿಂಗನನ್ನ ಕರಕೊಂಬರ್ರಿ" ಎಂದು ಹುಡುಗರಿಗೆ ಹೇಳಿ ಕಳಿಸಿದ.

ಬೇರ್ಮನೆಯಿಂದ ಮೆರವಣಿಗೆಯಲ್ಲಿ ಬರುವ ಮದಲಿಂಗನನ್ನು ನೋಡು ವುದಕ್ಕೂ ಪುಣ್ಯಬೇಕು. ಎರಡೇ ಕಣ್ಣಿದ್ದರೆ ಸಾಕೇ? ಅವನ ವರ್ಣನೆ ಮಾಡಿದರೆ ಕಣ್ಣ ಸರಾದೀತೆಂದೇ ಹೆದರಿಕೆ.

ಅಂದು ಅವನ ಮುಖದ ಮೇಲೆ ಅಪೂರ್ವ ಕಳೆ ತಳವೂರಿರಬೇಕು. ದಿರಸು ಹೇಗೇ ಅಂತೀರಿ? ತಲೆಯನ್ನು ಸುತ್ತಿರುವ ಕೆಂಪು ರೇಸಿಮೆಯ ವಸ್ತ್ರ, ಆ ವಸ್ತ್ರದ ಮುಂದಿನ ಅರ್ಧವನ್ನು ಮುಚ್ಚಿ ವಸ್ತ್ರಕ್ಕಿಂತ ನಾನು ಮೇಲು ಎಂದು ಹೆಮ್ಮೆನಿಂದ ಮೆರೆಯುತ್ತಿರುವ ಕೆರಸೆಗಿಂತ ಅಗಲವಾದ ಬಾಸಿಂಗ. ಅವೊತ್ತೇ ಹಣೆಯು ಕಂಡ ಕಪ್ಪಿನಬಟ್ಟು, ಕಿವಿಗೆ ಬಾವುಲಿಮುರ. ಒಳಗೆ ತೊಟ್ಟಿರುವ ಕೆಂಪು ಬಗಲಂಗಿ, ಅದರ ಮೇಲೆ ಬಹು ತೆಳುವಾದ 'ಕಲ್ಲರ್ ಸರಟು' ಮಲ್ಲಿನದು. ಆ ಮಲ್ಲುಷರಟು ಸಣ್ಣಂಗಿಯ ಕೆಂಪನ್ನು ಹೊರಗೆ ಬಿಡಬೇಕು. ಆ 'ಸರಾಟ'ನ ಮೇಲೆ ಕರಿಯ ಉಣ್ಣೆಯ ಕೋಟು. ಎದೆಯ ಮೇಲೆ ಹಾಯ್ದು ಭುಜದ ಮೇಲೆ ಜಿಗಿದು ಬೆನ್ನಮೇಲೆ ಹರಿದು ಪಾರಾಗಿರುವ ಉತ್ತರೀಯ. ಕೊರಳಲ್ಲಿ 'ನೆಲ್ಲಿಕಾಯಿ'ನ ಸರ. ಏನಿಲ್ಲೆಂದರೂ ನಾಬೆರಳು ಅಗಲದ ನಿಗಿನಿಗಿ ಉರಿಯುವ ಕೆಂಪಿನಬಣ್ಣದ ಬುಗುಡಿ ಅಂಚಿನ ಜೋಡು ಪಂಚೆ ಬಲದ ಕಣಕಾಲಿನಿಂದ ಕೆಳಕ್ಕಿಳಿಯಲು ಹವಣಿಸಬೇಕು, ಎಡಗಡೆ ಮುಂಡಿಯಿಂದ ಮೇಲಕ್ಕಡರಲು ತವಕಿಸುತ್ತಿರಬೇಕು. ಹೇಳಿಮಾಡಿಸಿದ, ಸುಮಾರು ಒಂದೇಗೇಣು ದಪ್ಪವುಳ್ಳ ಜೇಕಿನಜೋಡು ಅರಿಸಿನ ತೊಟ್ಟು ಕೊಂಡಿರುವ ಕಾಲುಗಳಿಗೆ. ದೃಷ್ಟಿಹೊಡೆದೀತೆಂದು ಬೆನ್ನು ಭುಜಗಳನ್ನು ಮುಚ್ಚಿಕೊಂಡಿರುವ ಅಪ್ಪಟ ಉಣ್ಣೆಯ ಸಣ್ಣ ಗೊಂಗಡಿ ರಕ್ಷೆಗಾಗಿ. ಮುಂಗೈಗೆ

ಒಂದೊಂದು ಸೇರು ಕುರಿ ಬೆಳ್ಳಿಯಿಂದ ಮಾಡಿಸಿದ ಬಳೆಗಳು. ಕೈಯಲ್ಲಿ ಬಣ್ಣ ಬಣ್ಣದ ಒಂದು ಕರವಸ್ತ್ರ. ಕೈಗೆರಡರಂತೆ ನಾಲ್ಕು ಬಂಗಾರದ ಉಂಗುರ. ಇಷ್ಟೇ ನಮ್ಮ ಸೀಮೆಯ ಮದಮಕ್ಕಳ ಅಲಂಕಾರ.

ಮೆರವಣಿಗೆಗೋಸ್ಕರವೆ ಬಹಳ ಕಷ್ಟಪಟ್ಟು, 'ಬಾಳ ಬಾಳ ಬುದ್ಧಿ ವ್ರಯಮಾಡಿ' ಅಲಂಕರಿಸಿದ್ದ ಮಾವಿನ ಸೊಪ್ಪನ್ನೇ ಹೇರಿಕೊಂಡಿದ್ದ ಬಂಡಿ. ಬಂಡಿಯ ಮೇಲೆ ಮಂಡಿಸಿರುವ ಒಂದು ಮಂಚ, ಮಂಚದ ಮೇಲೆ ಮದುಮಗ. ಮೆರವಣಿಗೆಹೊರಟಿತು.

ಆ ಸಮಯದಲ್ಲಿ ಮದಮಗ, ಮದಮಗ ಕುಳಿತುಕೊಳ್ಳುವ ರೀತಿ ಯಲ್ಲಿಯೇ ಕುಳಿತುಕೊಳ್ಳಬೇಕು. ಕೊರಳಲ್ಲಿರುವ ನೆಲ್ಲಿಕಾಯಿನ ಸರ, ಬೆರ ಳಲ್ಲಿರುವ ಉಂಗರ, ಕೈಯಲ್ಲಿರುವ ಕರವಸ್ತ್ರ ಇವನ್ನೆಲ್ಲಾ ಕಾಣುವಂತೆ ಆಗಾಗ 'ಸರಿಪಡಿಸಿ'ಕೊಳ್ಳಬೇಕು. ಬೆನ್ನುಗಿನ್ನು ಬಾಗಿಸದೆ ಆ ಕಡೆ ಈ ಕಡೆ ನೋಡದೆ ನೆಟ್ಟಗೆ 'ಚಿತ್ತಾರದ ಗೊಂಬೆ'ಯಂತೆ ಕುಳಿತಿರಬೇಕು; ಮುಖದ ಮೇಲೆ ಒಂದಷ್ಟು ಕಳೆಯನ್ನೂ ತಂದು ಎಳಕೊಳ್ಳಬೇಕು. ನಿವಾಳಿ ತೆಗೆಯು ವುದನ್ನೂ ನೋಡದವರಂತಿರಬೇಕು. ಹೀಗಿದ್ದರೆ ಅವನು ವರ! ಇಲ್ಲದಿದ್ದರೆ ಹಿಂದಿನಿಂದ ಯಾರಾದರೂ ಬಯ್ದುಬಿಡ್ತಾರೆ: "ಲೇ ನೆಟ್ಟಗೆ ಕೂತ್ಕೊಳ್ಳೋ ನಿನ್ನ ಹೇ........ಹೆಂಗೆ ಕುಂತುದಾನ್ನೋಡು ಜ್ವಾಬದ್ರಗೇಡಿ ಹಂಗೆ" ಹೀಗೆಂದು.

ನಮ್ಮ ಪುಟ್ಟಯ್ಯನೇನೋ ಜಾಣ. ಹೇಗೆ ಕುಳಿತುಕೊಳ್ಳಬೇಕೋ ಹಾಗೆಯೇ ಕುಳಿತಿದ್ದ. ಚೆಲುವ, ಕಳೆತುಂಬಿದ ದುಂಡು ಮುಖ. ಯಾರು ಅನ್ನುವ ಹಾಗೆ ಆಡಿಕೊಳ್ಳುವ ಹಾಗೆ ಇರಲಿಲ್ಲ. ಬಯ್ಯುವ ಮಾತೇ ದೂರ.

ಮೆರವಣಿಗೆ ಹಂದರದ ಬಳಿಗೆ ಬಂತು. ಮದಮಗನನ್ನು ನೆಲ ಮುಟ್ಟ ಬಾರದೆಂದು ಅವನನ್ನೂ ಕಂಕುಳಲ್ಲಿ ಎತ್ತಿಕೊಂಡು ಬಂದು ಹಂದರದಲ್ಲಿ ಅಣಿ ಮಾಡಿದ್ದ ಮಂಚದ ಮೇಲೆ ಕೂರಿಸಲಾಯಿತು.

ಎಷ್ಟೋ ಹೊತ್ತಾಯಿತು. ವಧುವು ಮಂಟಪಕ್ಕೆ ಬರಲೇ ಇಲ್ಲ. ಜನ ಕಾಯುತ್ತಾರೆ.

ಮುತ್ತೈದೆಯರ ಸಡಗರದಲ್ಲಿ ಬೀಗ ಬೀಗುತಿಯರ ಸಂಭ್ರಮದಲ್ಲಿ ಮುಹೂರ್ತದ ವೇಳೆ ಮೀರಿ ಹೋಯಿತು. ವಧುವಿನ ಅಲಂಕಾರವೇನೋ ಮುಗಿದಿತ್ತು; ವಧುವಿನ ಬಂಧುಬಳಗದವರ ಅಳುವು ಮಾತ್ರ ಇನ್ನೂ ಮುಗಿ

ದಿರಲಿಲ್ಲ. ಗಿರಿಯಯ್ಯನೇ ಬಂದು "ನಿಮಗೆ ಒಂದೀಟೂ ಬುದ್ಧಿಯಿಲ್ಲ, ಶುಭ ಕಾರ್ಯದಾಗೆ ಹಾಂಗೆಲ್ಲಾ ಅಳಬಾರದು, ಹುಟ್ಟಿದ ಹೆಣ್ಣು ಹುಟ್ಟಿದ ಮನೇಲಿ ಎಷ್ಟು ದಿನ ಇರೋದಕ್ಕಾದೀತು" ಎಂದೆಲ್ಲಾ ಗದರಿಸಿ ಸಿಂಗಾರವಾಗಿದ್ದ ವಧುವನ್ನು ಹೊರಗೆ ಕರೆತಂದ. ಒಳಗಿಂದ ಹಂದರಕ್ಕೆ ಬರುವಾಗ ವಧುವಿನ ತಲೆ ಬಾಗಿಲಿನ ಹುದಿ ಹೊಸಲಿಗೆ ತಾಗಿ ಸೂಡಿದ್ದ ಬಾಸಿಂಗ ಸ್ವಲ್ಪ ಓರೆಯಾಯಿತು. ಜೊತೆಗಿದ್ದವಳೊಬ್ಬಳು ಬಾಸಿಂಗ ನೆಟ್ಟಗೆ ಮಾಡಿ ನಿವಾಳಿ ತೆಗದ ಮೇಲೆ ವಧುವು ಮುಂದಕ್ಕೆ ಕಾಲಿಟ್ಟಳು.

ಮುಹೂರ್ತದ ವೇಳೆ ಮೀರಿದ್ದರಿಂದ ಗಿರಿಯಯ್ಯನ ಮನಸ್ಸು ಬಹಳ ಕದಡಿತ್ತು. ಆದರೂ ಅದನ್ನು ಹೊರಗೆ ತೋರಗೊಡದೆ ಬೇಗ ಕಾರ್ಯ ನಡೆಸಿರೆಂದು ಪುರೋಹಿತರಿಗೆ ಹೇಳುತ್ತ ಧಾರೆಯೆರೆಯುವುದಕ್ಕೆ ಸಿದ್ಧನಾಗಿ ಬಂದು ನಿಂತ.

ಶಾಸ್ತ್ರಿಗಳು ಸ್ವನಾಯ (ಓಲಗ) ಮಾಡ್ರೋ ಎಂದು ಓಲಗದವರಿಗೆ ಆಜ್ಞಾಪಿಸಿ ತಮ್ಮ ಮಂತ್ರ ಮೊದಲು ಮಾಡಿದರು.—ಸೋನಾಯನ ಶ್ರುತಿಯಿದ್ದರೇ ಅವರಿಗೆ ಮಂತ್ರ ಹೇಳಲು ಹುರುಡು—ಮಂತ್ರ ಅನ್ನುತ್ತ ವರನ ಕೈಯಲ್ಲೂ ವಧುವಿನ ಕೈಯಲ್ಲೂ ಬೆಲ್ಲ ಜೀರಿಗೆ ಇಟ್ಟರು. ಅಂತಃಪಟ ತಾಗಿ ಬೆಲ್ಲ ಜೀರಿಗೆ ನೆಲಕ್ಕೆ ಬಿದ್ದಿತು. ಗಿರಿಯಯ್ಯ "ಸರಿಯಾಗಿ ನೋಡಿ ಸುರಿಯಬಾರದಾಗಿತ್ತೆ" ಎಂದ—ಮುಖ ಚಿಕ್ಕದು ಮಾಡಿಕೊಂಡು.

'ಸರಿಯಾಗಿ ತಲೆಯೆತ್ತಿ ಕಣ್ಣೆತ್ತಿ ನೋಡುತ್ತಾಳೆಯೇ ಮೊದಲಗಿತ್ತಿ? ನೋಡಿದರೆ 'ನಾಚಿಕೆಗೇಡಿ' ಅಂದು ಬಿಡುತ್ತಾರೆ. ಅನೇಕ ಮೊದಲಗಿತ್ತಿಯರು ತಲೆಯನ್ನು ಪೂರ್ತಿ ತಗ್ಗಿಸಿಕೊಂಡೇ ಇರುತ್ತಾರೆ, ಅದು ಹೇಗೆ ನೋಡುವರೋ ಏನು ತಾನೋ? ಕೈಸೂಟಿಯೋ? ಸೀದ, ಸ್ವಲ್ಪವೂ ತಪ್ಪದಂತೆ, ವರನ ತಲೆಯ ಮೇಲೆಯೇ ಸುರಿಯುತ್ತಾರೆ. ಆ ವಿದ್ಯೆಗೆ ಗೌರಮ್ಮ ಇನ್ನೂ ತೀರಾ ಮುಗುದೆಯಾಗಿದ್ದಳು.

ಗಿರಿಯಯ್ಯ ಧಾರಾ ಕಳಸವನ್ನು ಹಿಡಿದು ನಿಂತ. ತನ್ನ ಒಬ್ಬಳೇ ಒಬ್ಬ ಮಗಳನ್ನು ಪುಟ್ಟಯ್ಯನಿಗೆ ಅರ್ಪಿಸುವ ಸಮಯವದು. ಅವನ ಕಣ್ಣಲ್ಲಿ ನೀರಾಡುತ್ತಿತ್ತು. ಶಾಸ್ತ್ರಿಗಳು ಹೇಳಿಕೊಟ್ಟಂತೆ 'ಧಾರೆಯೆರೆಯೋದಕ್ಕೆ

ಅರ್ಪ್ಪಣೆಯೇನ್ರಪ್ಪ' ಎಂದು ಸಭೆಯನ್ನು ಕೇಳಿದನು. ಸರ್ವರೂ "ಶಿವನಪ್ಪಣೆ" ಎಂದು ತಿಳಿಸಿದರು.

ಧಾರೆಯ ಕಾಲವಾದ್ದರಿಂದ ಓಲಗ ನಿಂತಿತ್ತು, ಶಾಸ್ತ್ರಿಗಳು ಮಂತ್ರವನ್ನು ಗೊಣಗುತ್ತಿದ್ದರು. ಧಾರೆ ಆಯಿತು, ತಾಳಿ ಕಟ್ಟಿ ಮುಗಿಯಿತು. ನೆರೆದಿದ್ದವರೆಲ್ಲಾ ವಧೂವರರಿಗೆ ಹರಸಿ ಅವರ ಮೇಲೆ ಮಂತ್ರಾಕ್ಷತೆಯ ಮಳೆಗರೆದರು. ಗಂಡಸರು, ಹೆಂಗಸರು, ಮಕ್ಕಳು ಎಲ್ಲರಿಗೂ ಫಲ ತಾಂಬೂಲ ದೊರಕಿತು. ವಧೂವರರು ಅಲ್ಲಿದ್ದ ಹಿರಿಯರಿಗೆಲ್ಲಾ ಬಾಗಿದರು. ಅಲ್ಲಿದ್ದ ಮುದುಕಿಯೊಬ್ಬಳು "ಕಂಡ ಕಂಡವರ ಕಾಲಿಗೆ ಬಿದ್ದರೆ ಗಂಡನ ಮನೆಗೆ ಹೋಗೋದು ತಪ್ಪುತ್ತದೇನಮ್ಮಾ, ಊರಿಗೇ ಒಂದು ಹೂವು ಇದ್ಹಾಂಗಿದ್ದೆ, ಹೋಗುತೀಯ" ಎಂದು ಮರುಗಿದಳು.

ಭೋಜನದ ಸಮಾರಂಭ ಮುಗಿಯಿತು. ಎಲ್ಲರೂ ವಧೂವರರನ್ನೂ ಗಿರಿಯಯ್ಯನ ಔದಾರ್ಯ ವಿತರಣೆಗಳನ್ನೂ ಹೊಗಳುತ್ತ ತಮ್ಮ ತಮ್ಮ ಮನೆಗಳಿಗೆ ಹೋದರು.

ಸಾಯಂಕಾಲ ಗಿಂಡಿಶಾಸ್ತ್ರ. ಮದಲಿಂಗ ಆಗ ಮದುವೆಯ ಮನೆಯಿಂದ ಗಿಂಡಿಯನ್ನು ಕದ್ದುಕೊಂಡುಹೋಗಿ ಬೇರ್ಮನೆ (ಬೇರೊಂದು + ಮನೆ = ಬೇರ್ಮನೆ) ಯಲ್ಲಿರುತ್ತಾನೆ. ಅವಿತುಕೊಂಡಿರುತ್ತಾನೆ! ವಧುವು ಹೋಗಿ ವರನನ್ನು ಹುಡುಕಿಕೊಂಡು ಪುನಃ ಮೆರವಣಿಗೆಯಲ್ಲಿ ಮದುವೆಯ ಮನೆಗೆ ಬರಬೇಕು. ವರನು ಆಗ ಕಳ್ಳತಾನೆ. ಆದುದರಿಂದ ಕಳ್ಳನಂತೆಯೇ ಬೇರ್ಮನೆಗೆ ಜಾರಿರುತ್ತಾನೆ.

ವಧುವಾದರೆ ಧಾಳಿಯಿಡುವುದಕ್ಕೆ ಹೊರಡುವ ಪರಾಕ್ರಮಿಯಂತೆ ತನ್ನ ಚದುರಂಗ ಸೈನ್ಯ (ಮುತ್ತೈದೆಯರು ಹುಡುಗರು ಹುಡುಗೆಯರು ಮಕ್ಕಳು) ದೊಡನೆ ಮೆರೆಯುತ್ತ ಹೊರಟಳು. 'ಧಾರೆ'ಗೆ ವರನನ್ನು ಕರತಂದಿದ್ದ ಅಲಂಕಾರವಾಗಿದ್ದ ಬಂಡಿ ಅಲ್ಲಿಯೇ ಇತ್ತು, ಅದೇ ವಾಹನವನ್ನೇರಿದಳು. ವಧುವಿನ ಹತ್ತಿರದ ಸಂಬಂಧಿಯೊಬ್ಬಳು 'ಓಕಳಿ' ತೆಗೆಯುವುದಕ್ಕಾಗಿ ವಧುವಿನ ಪಕ್ಕದಲ್ಲೇ ಕುಳಿತಳು. ಓಕಳಿ ತೆಗೆಯುವ ಅವಕಾಶ ಸಾಮಾನ್ಯವೇನಲ್ಲ. ದೊಡ್ಡ ಸಂಸ್ಥೆಗಳ ಸಮಾರಂಭದಲ್ಲಿ 'ವರದಿ'ಯನ್ನು ಓದಿದಹಾಗೆ, ಹೆಜ್ಜೆಹೆಜ್ಜೆಗೂ 'ನಿವಾಳಿ' ತೆಗೆಯುವುದೇ ಅವರ ಕೆಲಸ.

ಮುತ್ತೈದೆಯರು ತಮ್ಮ ನೆಗಗಳನ್ನು ಪೆಟ್ಟಿಗೆಯಿಂದ ಆಗತಾನೆ ಹೊರಗೆ ತೆಗೆದಿದ್ದ ಬಣ್ಣಬಣ್ಣದ ಸೀರೆ ಕುಪ್ಪಸಗಳನ್ನೂ ಪ್ರದರ್ಶಿಸುತ್ತ ಹೆಜ್ಜೆಯ ಮೇಲೆ ಹೆಜ್ಜೆಯಿಡುತ್ತ, ಕೈಯನ್ನು ಅಲಂಕರಿಸಿರುವ ಕಂಕಣವನ್ನು ಆಗಾಗ ಸರಿಪಡಿಸಿಕೊಳ್ಳುತ್ತ ಬಂಡಿಯನ್ನು ಹಿಂಬಾಲಿಸಿದರು. ಮದಮಗನಿಗೂ ಮೊದಲಗಿತ್ತಿಗೂ ಸಂಬಂಧಿಸಿದ ಚಿಕ್ಕಮಕ್ಕಳು ಗೌರಮ್ಮನ ಸಮೀಪದಲ್ಲಿಯೇ ಕುಳಿತು 'ದರ್ಬಾರು' ನಡೆಸುತ್ತ ಆಗಾಗ ತಮ್ಮ ಚೇಷ್ಟೆಯಿಂದ ಮದುಮಗಳನ್ನೂ ನಗಿಸುತ್ತಿದ್ದರು. ಅವರ ಕೃಪಾಕಟಾಕ್ಷಕ್ಕೆ ಪಾತ್ರರಾದ ನೆರೆಮನೆಯ ಹುಡುಗರೂ ಬಂಡಿಯ ಸಂದಿಗೊಂದಿಯಲ್ಲಿ ಸಿಕ್ಕಿಕೊಂಡಿದ್ದರು. ಇನ್ನೂ ಮದುವೆಯಾಗದಿದ್ದ 'ಕೋರು' ಹುಡುಗರು ತಾವು ಶಕ್ತಿಮೀರಿ ಅಲಂಕಾರಮಾಡಿಕೊಂಡು ಬಂಡಿಯ ನೊಗಕ್ಕೆ ಹೆಗಲಿಟ್ಟಿರುವರು. ಗೌರಮ್ಮನ ಕೆಳದಿಯರು, ಬಳಗದವರು—ಅವರಲ್ಲನೇಕರಿಗೆ ಇನ್ನೂ ಕೊರಳಿಗೆ ಬಂದಿರಲಿಲ್ಲ—ತಮ್ಮ ಗೆಳತಿಯ ಮದುವೆಯೇ ನೆಪವಾಗಿ ಅಂದವಾಗಿ ಸಿಂಗರಿಸಿಕೊಂಡು ಮುತ್ತೈದೆಯರ ಸುತ್ತಲೂ ತಿರುಗಾಡುತ್ತ ಏನೇನೋ ಕಿಸುಗುಟ್ಟುತ್ತಾರೆ, ಒಂದೊಂದು ತಡವೆ ನಿವಾಳಿ ತೆಗೆಯುವವಳನ್ನೂ, ಗೌರಮ್ಮನನ್ನೂ ಮುತ್ತಿ ಅವರನ್ನು ಗೇಲಿಮಾಡಿ ನಕ್ಕುನಗಿಸಿ ಮತ್ತೆ ಮುತ್ತೈದೆಯರ ಗುಂಪನ್ನು ಸೇರುತ್ತಾರೆ.

ಬಹಳ ಸಡಗರದಿಂದ ಸಂಭ್ರಮದಿಂದ ಹಾದಿ ಸವೆಯುತ್ತಿದೆ. ಗಳಿಗಿಗಳಿಗೆಗೂ ಓಲಗದವರಿಗೆ 'ತ್ಯಾಗ' ಹಾಕಿ ಅವರ ನಾಗಸ್ವರವನ್ನ ಕೇಳಿದ್ದೂ ಕೇಳಿದ್ದೇ. ಮೆರವಣಿಗೆ ಕೊನೆಮುಟ್ಟಿ ಬೀರ್ಮನೆ ಬಂದೇಬಿಟ್ಟಿತು.

ಬಂಡಿಯಿಂದ ಹೆಣ್ಣನ್ನಿಳಿಸಿ ಬೀರ್ಮನೆಗೆ 'ಹೊತ್ತು' ತಂದದ್ದಾಯಿತು. ಎಲ್ಲರೂ ಬೀರ್ಮನೆಯೊಳಕ್ಕೇನೋ ಬಂದರು. ಇನ್ನು ಹಸೆಯನ್ನು ಹಾಸುವುದಕ್ಕಾಗಿ ಹಸೆಯ ವಸ್ತ್ರದ ಮಡಿಕೆಯನ್ನು ಬಿಚ್ಚಬೇಕು, ಒಂದು ಚಿಕ್ಕ ಮಿಡಿನಾಗರ ವಸ್ತ್ರದಿಂದ ಹೊರಬಿದ್ದು ಹರಿದುಬಂತು. ಹಾವು, ಹಾವು ಎಂದು ಅರಚುತ್ತ ಕಿರುಚುತ್ತ ಜನವೆಲ್ಲಾ ಚಲ್ಲಾಪಿಲ್ಲಿಯಾದರು. ಯಾರೋ ಹೋಗಿ ಆ ಹಾವಿನ ಮರಿಯನ್ನು ಒಂದು ದೊಣ್ಣೆಯಿಂದ ಕುಟುಕಿದರು. ಪುನಃ ಜನ ಸೇರಿತು.

ಎಲ್ಲರೂ ಏನೋ ಚಿಂತಿಸುತ್ತಿರುವಂತೆ ತೋರಿತು. ನಗುತ್ತಲೇನೋ ಇದ್ದರು. ಆ ನಗುವಾತ್ರ ನಾಟಕರಂಗದ ಮೇಲೆ ನಟರ ನಗುವಿನಂತೆ. ಅಸಮಾಧಾನವನ್ನು ನಗೆಯಿಂದ ಮುಚ್ಚುತ್ತಿರುವಂತೆ ಕಾಣುತ್ತಿದೆ.

ಇನ್ನು ಹೆಣ್ಣು ಗಂಡನ್ನು ಹುಡುಕಬೇಕು. ಆಗಲೇ ಗಂಡಿನ ಕಡೆಯುವರು ಬಂದು ಖಂಡಿತವಾಗಿ ಹೇಳಿಬಿಟ್ಟರು: "ಹೆಣ್ಣೇ ಗಂಡನ್ನು ಹುಡುಕಬೇಕು, ಬೇರೆಯುವರು ಯಾರೂ ಮುಂದೆ ಹೋಗಬಾರದು, ಬೇಕಾದರೆ ಅವರೂ ಹೆಣ್ಣಿನ ಜೊತೆಯಲ್ಲಿದ್ದು ಸಹಾಯಮಾಡಬಹುದು" ಎಂದು. ಜನ ಕೇಳಿದರೆ ತಾನೆ. ಹುಡುಕಾಟ ಮೊದಲಾಯಿತು. ಬಾಗಿಲಸಂದಿ, ಕಿಟಕಿಯುಗೂಡು, ಪೆಟ್ಟಿಗೆಯಸಂದಿ, ಕಣಜದ ಹಿಂದೆ, ಆ ಕೋಣೆ, ಈ ಕೋಣೆ, ಕಿರುಮನೆ, ಅಟ್ಟ, ಮಾಳಿಗೆ—ಎಲ್ಲಾ ಕಡೆಯೂ ಹುಡುಗರು ಹುಡುಗಿಯರು ನಗುತ್ತ ಕುಣಿಯುತ್ತ ಓಡೋಡಿಹೋಗಿ ಅಲ್ಲಿ 'ಗಂಡು' ಇಲ್ಲದಿರಲು ನಿರಾಶರಾಗಿ ಹಿಂದಕ್ಕೆ ಬರುತ್ತಿದ್ದರು. ಯಾವ ಸಂದಿಗೊಂದಿ, ಗೊತ್ತಿನಲ್ಲೂ ವರ ಸಿಗಲಿಲ್ಲ.

ಹೆಣ್ಣು ಗಂಡನನ್ನು ಹುಡುಕುವುದಕ್ಕಾಗಿ ಮುಂದೆಬಂದಳು, ತನ್ನ ಪತಿ ದೇವರು ಇನ್ನುಳಿದವರಿಗೆ ಹೇಗೆ ಸಿಕ್ಕಾನು ಎಂಬ ಹಮ್ಮಿನಿಂದ ಹುಡುಕಾಟಕ್ಕೆ ಮೊದಲುಮಾಡಿದಳು. 'ನನಗೇ ಸಿಕ್ಕಿಬಿಟ್ಟರೆ ಎಷ್ಟುಚೆನ್ನು! ಆಮೇಲೆ ಎಲ್ಲರೂ ನನ್ನನ್ನು ಹಾಸ್ಯಮಾಡುವಾಗ ಎಷ್ಟು ಹಿತವಾಗಿರುವುದು! ಎಂದು ಆಕೆಗೆ ಹಿಗ್ಗು. ಮುಖ ಕಿವಿಗಳನ್ನು ಕೆಂಪಗೆ ಮಾಡಿಕೊಂಡು ಕಣ್ಣುಗಳನ್ನು ಅಗಲವಾಗಿ ಬಿಟ್ಟುಕೊಂಡು ಮುಗುಳುನಗೆ ನಗುತ್ತ ಹುಡುಕುವುದಕ್ಕೆ ಪ್ರಾರಂಭ. ಮತ್ತೆ ಯಾರಾದರೂ ತಾನು ಈ 'ಹುಡುಕಪ್ಪ' ನನ್ನು ಆಡು ವುದನ್ನು ಕಂಡು ಗೇಲಿಮಾಡಿಯಾರೆಂಬ ಭಯ ಬೇರೆ. ಆದರೂ ಹುಡುಕಿ ದಂತೆ ಮಾಡಿದಳು. ಆಕೆಗೇನೂ ಪತಿದೇವ ಪ್ರತ್ಯಕ್ಷವಾಗಲಿಲ್ಲ.

ಈ ಗದ್ದಲದಲ್ಲಿ ಗಂಡಿನ ಗೆಳೆಯ ತಿಮ್ಮನಿಗೆ ಅತ್ಯಂತ ಅಸಮಾಧಾನ. ಬಾಯಲ್ಲಿ ಅಕ್ಕಿಕಾಳು ಹಾಕಿಕೊಂಡಿದ್ದಾನೆ, ಆ ಚಿಂತೆ ಅವನ ಮುಖದ ಮೇಲೂ ಒಡೆದು ಕಾಣುತ್ತಿದೆ. ಹೆಣ್ಣಿನ ಕಡೆಯವರು ಬೇಗನೆ ಸೋಲ ನ್ನೊಪ್ಪಿಕೊಳ್ಳಬಾರದೇ ಎಂದುಕೊಳ್ಳುವನು. ಅಲ್ಲಿಯೇ ಕುಳಿತಿದ್ದ ರಾಮಣ್ಣ ನನ್ನು ಕರೆದು ಪಿಸುಮಾತಿನಲ್ಲಿ "ಹೇಳಿಬಿಡೋಣಾಕಣೋ ಬಹಳ ಹೊತ್ತಾಯ್ತು" ಎಂದರೆ ರಾಮಣ್ಣ—ಅವನು ತುಂಬ ಒರಟ ಹುಂಬ, ಅವನ

ಮಾತೇ ಗೆಲ್ಲಬೇಕು—ಸುಮ್ಮನಿರೋ ಏನುಮಹಾ ಕೊಳ್ಳೆಹೋಗೋದು! ನಮ್ಮೂರಾಗೆ, ಇದೇ ಊರಿನ ಆ ಬಣಕಾರ ಬಸವನ ಮದುವೇಲಿ ನಮ್ಮೂರಿನವರೇ ಸೋಲಲಿಲ್ಲವೇ? ಈಗ ಇವರು ಹಾಕ್ಲಿ ಲಾಗಾನ" ಎಂದುಬಿಟ್ಟ. ತಿಮ್ಮ ಇನ್ನೂ ಚಿಕ್ಕಹುಡುಗ, ರಾಮಣ್ಣನ ಗಡಕಿಗೆ ಬೆದರಿ ಸುಮ್ಮನಾಗಿಬಿಟ್ಟ. ಹೆಣ್ಣಿನ ಕಡೆಯವರು ಸೋತರೆ ಇವನೂರಿಗೇ ಗೌರವ ಅಲ್ಲವೇ?

ಹೆಣ್ಣೂ ಹೆಣ್ಣಿನ ಕಡೆಯವರೂ ಸೋತು ಸುಣ್ಣವಾದರು. "ಮನೆಯ ಸೂರಿನಿಂದ ಹೊರಗಡೆ ಬಚ್ಚಿಟ್ಟಿದ್ದರೆ ನಮ್ಮ ಸೋಲನ್ನು ಒಪ್ಪಿಕೊಳ್ಳೋದಿಲ್ಲ ನೋಡ್ರೀ" ಎಂದರು. ರಾಮಣ್ಣ—

"ಹೊರಗೇನೂ ಇಲ್ಲ ಒಳಗೇ ಇರೋದು. ಸೋತೆವೆಂತ ಒಪ್ಪಿಕೊಳ್ಳಿ" ಅದೇ ಹುಮ್ಮಸಿತ್ತು ಅವನ ಮಾತಿನಲ್ಲಿ.

ಹೆಣ್ಣಿನ ದಂಡು ಮನೆಯನ್ನೆಲ್ಲಾ ಇನ್ನೊಂದು ಸಾರಿ ಗೋರಿಸಿದರು. ವರ ಸಿಗಲಿಲ್ಲ. ಸೋತೆವೆಂದೂ ಒಪ್ಪಿಕೊಂಡರು. ರಾಮಣ್ಣ ಅಷ್ಟಕ್ಕೇ ಬಿಡಲಿಲ್ಲ.

'ಹೆಸರು ಹೇಳಬೇಕು'

ಹೆಣ್ಣಿನ ಅಕ್ಕ 'ಹೇಳೆ ತಾಯಿ, ಹೇಳಿದರೆ ನೀನೇ ಗೆದ್ದ ಹಾಗೆ, ಹೆಸರನೇನು ಉಪ್ಪಿನಕಾಯಿಗೆ ಹಾಕ್ಕೋತಿಯಾ ಹೇಳು' ಎನ್ನುತ್ತಿದ್ದಂತೆಯೇ ಮತ್ತೆ ರಾಮಣ್ಣ—

"ಹಾ, ಹಾ ತಡೀರಿ ತಾಯೀ ತಡೀರಿ, ಬರೀ ಹೆಸರು ಹೇಳಿಬಿಟ್ಟರೆ ಹೆಂಗಾದೀತು. ಒಗಟು ಸೇರಿಸಿ ಹೇಳಬೇಕು, ನನ್ನ ಪುಟ್ಟಯ್ಯನ್ನ ಹಾಗೇ ತೋರಿಸೋನಲ್ಲ ನಾನು. ಹುಡುಗನ್ನ ಗೆದ್ದುಬಿಟ್ಟಿವು ಅಂತ ತಿಳಿದಿರೇನು?" ಹೀಗಂತ ಚುಚ್ಚು ಮಾತಾಡಿದ.

'ಏನಂತ ಹೇಳಬೇಕು, ನೀವೇ ಹೇಳಿ ಕೊಡಿ' ಎಂದಿತು ಪಾರಿ, ಹೆಣ್ಣಿನತಂಗಿ. ರಾಮಣ್ಣ—ನಾವು ಅದನ್ನೂ ಹೇಳಿಕೊಡಬೇಕೇನು? ಎಂದ.

ಗೌರಮ್ಮ ಎಲ್ಲರಿಂದಲೂ ಹೇಳು ಹೇಳು ಎನ್ನಿಸಿಕೊಳ್ಳಲಾರದೆ, ಬಾಯಿಬಿಟ್ಟು ಹೇಳಲೂ ಆರದೆ ತೊಳಲಾಡಿ ಕೊನೆಗೆ ಗಟ್ಟಿ ಮನಸ್ಸು ಮಾಡಿಕೊಂಡು ತಲೆಯನ್ನು ಪೂರ್ತಿ ತಗ್ಗಿಸಿ ನೆಲದ ನೆಲೆಯನ್ನೇ ನೋಡುತ್ತ ನಡುಗುವ ಕಂಠದಿಂದ ತನಗೂ ಕೇಳಿಸಿತೋ ಇಲ್ಲವೋ ಅಷ್ಟು ಮೆಲುದನಿಯಲ್ಲಿ ತೀರದ ಮೆಲ್ಲಗೆ

" ಕೊರಳೊಳಗೆ ಕಟ್ಟಾಣಿ
ಕರುಳೊಳಗೆ ಪುಟ್ಟಣ್ಣ"

ಎಂದು ಹೇಳಿ ಒಂದು ದೊಡ್ಡ ಕುತ್ತದಿಂದ ಪಾರಾದವಳಂತೆ ನಿಡಿದಾಗಿ ಉಸಿರು ಬಿಟ್ಟು ನಿಂತಳು. ರಾಮಣ್ಣ ಪುನಃ 'ನನಗೆ ಕೇಳಿಸಲೇ ಇಲ್ಲ' ಅಂತ ವರಸೆ ತೆಗೆದ.

ಹತ್ತಿರವೇ ನಿಂತಿದ್ದ ಮುತ್ತೈದೆ " ಹೋಗಲಿ ಇನ್ನೊಂದು ಸಾರಿ ಹೇಳಿ ತಾಯಿ, ನಾಚಬಾರದು" ಎಂದರೂ ಹೆಣ್ಣು ತುಟಿ ಎರಡು ಮಾಡಲಿಲ್ಲ. ಇನ್ನೊಬ್ಬಳು " ಮಹಾರಾಯಿತಿ, ಒಂದು ಸಾರಿ ಹೆಸರು ಹೇಳಿದ್ದಕ್ಕೇ ಬೆವರೊಳಗೆ ಮಿಂದಿದ್ದೀಯಲ್ಲೇ! ಹೇಳು ಇನ್ನೊಂದಂತಾ" ಎನ್ನಲು ಗೌರಮ್ಮ ತಟಕ್ಕನೆ ಹೆಸರನ್ನಷ್ಟೇ ಅಂದುಬಿಟ್ಟಳು.

ಎಲ್ಲರೂ ನಕ್ಕರು, ಕೇಕೆ ಹಾಕಿ ನಕ್ಕರು. ಗಂಡಿನ ಕಡೆಯವರಿಗಂತೂ, ಅದರಲ್ಲೂ ರಾಮಣ್ಣನಿಗೆ ಪರಮಾನಂದ.

ಈ ಹೆಸರು ಹೇಳಿಸುವ ಗಲಾಟೆಯಲ್ಲಿ ಎಷ್ಟೋ ಹೊತ್ತು ಕಳೆದು ಹೋಯಿತು. ಹೆಣ್ಣಿಗೆ ಸಿಟ್ಟು, ಹೆಸರು ಹೇಳಿಪರೂ ಪೀಡಿಸುತ್ತಿದ್ದಾರಲ್ಲಾ ಎಂದು; ಪತಿದೇವನ ಮುಖ ನೋಡುವೆನಲ್ಲಾ ಎಂದು ಒಂದು ಕಡೆ ನಾಚಿಕೆ, ಇನ್ನೊಂದು ಕಡೆ ಆನಂದ. 'ನೋಡು ಅಂದು ಗೋಳಾಡಿಸಿದ್ದು ಹೇಗಿತ್ತು' ಎಂದು ಪತಿದೇವನಿಂದ ಅನ್ನಿಸಿಕೊಳ್ಳುವ ಬಯಕೆ.

ರಾಮಣ್ಣ ಎಲ್ಲರನ್ನೂ ಕರೆದುಕೊಂಡು ಹೋಗಿ, ಒಂದು ದೊಡ್ಡ ಪಿಟಾರಿಯ ಬಾಗಿಲು ತೆರೆದು ಸಂತೋಷದಿಂದ—

'ಏಳೋ ಪುಟ್ಟ, ನಾವೇ ಗೆದ್ದವರು' ಎಂದು ಕರೆದ.

ಪುಟ್ಟಯ್ಯ ಏಳಲಿಲ್ಲ.

'ಯಾಕೋ? ನಾಚಿಕೆಯೇನೋ ಕಳ್ಳನ ಹಾಗೆ ಅವಿತುಕೊಂಡಿದ್ದಕ್ಕೆ' ಎಂದರೊಬ್ಬರು.

ಇನ್ನೊಬ್ಬ 'ಇನ್ನೊಂದುಸಾರಿ ನಿನಗೆ ಕೇಳಿಸುವಂತೆ ಹೆಸರು ಹೇಳಬೇಕೇನೋ.'

ಪುಟ್ಟಯ್ಯ ಅಲುಗಾಡಲಿಲ್ಲ. ಪಿಟ್ಟನ್ನಲಿಲ್ಲ. ಅಲ್ಲಿಯೇ ಹಿಂದೆ ನಿಂತಿದ್ದ ಹಿರಿಯ ಮುತ್ತೈದೆಗೆ ಏನೋ ಸಂಶಯ ಬಂದಿದೆ, ಬಾಯಿಬಿಟ್ಟು ಆವುದಿರಲಿ, ಹಾಗೆ ಶಂಕಿಸುವುದಕ್ಕೂ ಮನಸ್ಸಿಲ್ಲ. ತಾನೇ ಮುಂದೆ ಬಂದು ಗಡ ಗಡಾ ಬರ್ರೋ

ತಮ್ಮ, ಶಾಸ್ತ್ರ ಮಾಡಾಕೆ ಹೊತ್ತಾಯ್ತು ಎಂದು ಕರೆದಳು. ಒಬ್ಬಿಬ್ಬರು ಹುಡುಗರು ಹೋಗಿ ಪುಟ್ಟಯ್ಯನನ್ನು ಅಲುಗಿಸುತ್ತಾರೆ: ಮೈ ಆಣೆ ಕಲ್ಲಾಗಿದೆ. ಇವರಿಗೆ ಗಾಬರಿ! ಮುಖ ಅಡಿಯಾಗಿ ಮಲಗಿದ್ದವನನ್ನು ಎತ್ತಿ ಕುಳ್ಳಿರಿಸಿದರು.

ಕಣ್ಣು ಮುಚ್ಚಿದ್ದುವು, ಕಳಸ ಬಿದ್ದಿತ್ತು, ಪ್ರಾಣಪಕ್ಷಿ ಹಾರಿಹೋಗಿತ್ತು. ಎಲ್ಲ ಮಿಂಚಿಹೋಗಿದೆ.

ಪಾಪ, ಪುಟ್ಟಯ್ಯ ಪೆಟ್ಟಿಗೆಯಲ್ಲಿ ಕುಳಿತುಕೊಳ್ಳಲು ಹಿಂಜರಿದ. ಆ ಆತುರದಲ್ಲಿ ಬುದ್ಧಿ ಎಲ್ಲಿಯೋ ಮಾಯವಾಗಿತ್ತೆಂದು ತೋರುತ್ತದೆ. ವಧುವು ಬೀರ್ಮನೆಯ ಹತ್ತಿರ ಬರುವವರೆಗೂ ಏನೇನೋ ಹರಟುತ್ತ ಕುಳಿತಿದ್ದರು. ಆಗ ರಾಮಣ್ಣ ಗಡಿಬಿಡಿಯಿಂದ 'ಬಂದೇಬಿಟ್ರು ಕಣೋ ಎಲ್ಲಾದರೂ ಅವಿತು ಕೊಳ್ಳೋ ಪುಟ್ಟೂ' ಎಂದ. ಪುಟ್ಟಯ್ಯ ಆಕಡೆ ಈಕಡೆ ನೋಡುತ್ತ ತಡ ವರಿಸ ಹತ್ತಿದ. ಅವನ ಸ್ಥಿತಿಯನ್ನು ನೋಡಿ ಅಲ್ಲಿಯೇ ಇದ್ದ ತಿಮ್ಮನಿಗೆ ನಗು. ಬಳಿಯಲ್ಲಿಯೇ ಇದ್ದ ದೊಡ್ಡದೊಂದು ಪಿಟಾರಿಯ ಕಡೆ ಕೈತೋರಿಸಿ 'ಅದರೊ ಳಗೆ ಹೊಕ್ಕಳೋ' ಎಂದ ತಮಾಷೆಗೆ. ಮಕ್ಕವರಿಗೆ ಅದೇಸ್ಥಳ ಸರಿಯಾಗಿ ಕಂಡಿತು. ರಾಮಣ್ಣನಂತೂ 'ಹೌದು ಕಣೋ ಅಲ್ಲಿಯೇ ಅವಿತುಕೋ, ಹಾಗಾ ದರೆ ಅವರು ಖಂಡಿತ ಸೊಲ್ತಾರೆ' ಎನ್ನುತ್ತ ಬೀಗತೆಗೆದು ಬಾಗಿಲುತೆರದು 'ಬಾರೋ ಪುಟ್ಟದಾಡು! ಹತ್ತಿರ ಬಂದೇಬಿಟ್ಟರು—ಏಳೋ' ಎಂದು ಸಿಡುಕಿಬಿಟ್ಟ.

ತಿಮ್ಮನ ಮನಸ್ಸಿನಲ್ಲಿ ಆಗಲೇ ಕಿರಿಕಿರಿ. ತಾನೇ ಪೆಟ್ಟಿಗೆಯನ್ನು ತೋರಿ ಸಿದ್ದಕ್ಕೆ ಮಿಡುಕಿದ. ಕೊನೇ ಗಳಿಗೆಯಲ್ಲಿ 'ಪೆಟ್ಟಿಗೆಯಲ್ಲಿ ಕುಳಿತುಕೊಳ್ಳು ವುದು ಬೇಡ' ಎನ್ನುವುದಾದರೂ ಹೇಗೆ? ಹಾಗೆಂದ ಕೂಡಲೇ ಎಲ್ಲರೂ ಅವ ನನ್ನು ಮುತ್ತಿ ಬಿಡುತ್ತಾರೆ. ಅವನ ಕಡೆಯವರೇ ಸೋಲಬೇಕಾದೀತು. ಹೀಗೆಲ್ಲಾ ಆಲೋಚನೆಮಾಡಿ ತೆಪ್ಪಗೆ ಕುಳಿತುಬಿಟ್ಟ. ಪುಟ್ಟಯ್ಯ ಹೇಳಿಗೆಯನ್ನು ಹೊಕ್ಕ. ರಾಮಣ್ಣ ಪಿಟಾರಿಯನ್ನು ಮುಚ್ಚಿ ಬೀಗಹಾಕಿ ಬೀಗದಕೈಯನ್ನು ತನ್ನಬಳಿ ಭದ್ರವಾಗಿಟ್ಟುಕೊಂಡಿದ್ದ. ಪಿಟಾರಿಯೂ ಬಹಳ ಭದ್ರವಾಗಿತ್ತು, ಒಂದು ಬಿರುಕು ಸಹ ಇರಲಿಲ್ಲ. ಮೇಲಿನ ಮುಚ್ಚಳ ಮಾತ್ರ ಒಂದು ಹಂಚಿಕಡ್ಡಿಯ ಗಲ ಸೀಳಿದ್ದಿತು. ಅವರೆ ಆ ಸೀಳು ಪುಟ್ಟಯ್ಯನನ್ನು ಉಳಿಸಲು ಶಕ್ತವಾಗಲಿಲ್ಲ.

ಒಂದು ಕ್ಷಣ ಹಿಂದೆ ಸಂತೋಷಸಾಗರದಲ್ಲಿ ಮುಳುಗಿ ಮಿಂದವರೆಲ್ಲರೂ ತಳವಿಲ್ಲದ ಅಳಲ ಕಡಲಿನಲ್ಲಿ ಎಡವಿಬಿದ್ದರು. ಯಾರೂ ಯಾರನ್ನೂ ಆಕ್ಷೇಪಿಸುವಹಾಗಿಲ್ಲ, ಅನ್ನುವಹಾಗಿಲ್ಲ. ಯಾರಿಗೂ ವಧುವಿನ ಮುಖವನ್ನು ನೋಡುವುದಕ್ಕೂ ಧೈರ್ಯವಿಲ್ಲ. ತಿಮ್ಮ ತವರೂಷೆಗೆ ತೋರಿದ ಪೆಟ್ಟಿಗೆ ಪುಟ್ಟಯ್ಯನ ಪಾಲಿಗೆ ಹಾವಿನ ಹೇಳಿಗೆ ಆಯಿತು. ಸಿಂಹದಹಾಗೆ ಗುಡುಗುತ್ತ ಹುಂಬತನವನ್ನು ಮೆರೆಸುತ್ತಿದ್ದ ರಾಮಣ್ಣನಿಗೆ ಉಸಿರೇ ಇಲ್ಲ, ಮೂಲೆಯ ಮಟ್ಟಾಗಿ ಕುಳಿತಿದ್ದಾನೆ. ಅವನ ಅಳಲಿನ ಆಳವನ್ನು ಅಳೆಯುವವರಾರು? ಮುಂಜಾನೆ ಬೀಗನೊಡನೆ 'ಹುಸಿಜಗಳ' ಆಡಿದ ಬಸವಯ್ಯನ ಬಾಯಿಗೆ ಬೀಗ ಬಿದ್ದಿತ್ತು. ನಿಜಸ್ಥಿತಿಯನ್ನು ಅರಿತ ಕೂಡಲೇ ವಿಧಿಗೆ ತಲೆಬಾಗುವವನಂತೆ ತಲೆಬಾಗಿ, ಮಗ ಸೊಸೆಯರ ಸಂಸಾರವನ್ನು ನೋಡುವ ಪುಣ್ಯದಿಂದ ವಂಚಿತನಾಗಿರುವುದು ತನ್ನ ದುರದೃಷ್ಟವೆಂದುಕೊಂಡು ಕಣ್ಣೀರ್ಗರೆಯುತ್ತ ಮಗನನ್ನು ಎತ್ತಿ ಮುದ್ದಾಡಿದ—ಕೊನೆಯಬಾರಿ.

ವಧು, ಅಲ್ಲ ವಿಧವೆಯ ತಾಯಿತಂದೆಗಳೂ ಮೌನ. ತಮ್ಮ ಮಗಳ ಪಾಳು ಹಣೆಯಬರಹವನ್ನು ಕಂಡು ಕಣ್ಣೀರ ಕಾಲುವೆಯನು ಹರಿಸುತ್ತಿದಾರೆ. ನೋಡಬಂದ ತರುಣ ತರುಣಿಯರ ಉತ್ಸಾಹಕ್ಕೆ ದುಗಡದ ಅಣೆಕಟ್ಟು ಕಟ್ಟಿಬಿಟ್ಟಿತ್ತು. ಅರಿಯದ ಚಿಕ್ಕಮಕ್ಕಳು ಇದೇನು 'ಇವರೆಲ್ಲಾ ನಮ್ಮಹಾಗೆ ಅಳುತ್ತಿದ್ದಾರೆ' ಎಂದುಕೊಳ್ಳುತ್ತಾ ಸಂತೈಸುವ ಕಣ್ಣುಗಳಿಂದ ಅಳುವವರನ್ನೇ ನೋಡುತ್ತಿವೆ. ಹಸುಗೂಸುಗಳು ತಮ್ಮನ್ನು ಹೊತ್ತಿದ್ದವರು ಅಳುತ್ತಿರುವುದನ್ನು ನೋಡಿ ತಾವೂ ದೊಡ್ಡದನಿ ತೆಗೆದು ಅಳಲಾರಂಭಿಸುದುವು.

ಗೌರಮ್ಮ. ವಿಧವೆ. ತುಟಿ ಎರಡು ಮಾಡಲಿಲ್ಲ. ಕಣ್ಣು ಪಿಳುಕಿಸುತ್ತಿಲ್ಲ. ಕಣ್ಣೀರು ಸುರಿಸಲಿಲ್ಲ. ಚಿತ್ರದ ಗೊಂಬೆಯಂತೆ ನಿಂತಿರುವಳು. ಏನನ್ನೋ ಯೋಚಿಸುತ್ತಿದ್ದ ಹಾಗೆ ಬೇರೆ ಅವಳ ಮುಖ ಕಾಣಲಿಲ್ಲ.

ಸಂಸಾರವೆಂಬ ಮನೆಯ ಹೊರಬಾಗಿಲ ಹೊಸ್ತಿಲನ್ನು ದಾಟುವ ಮುನ್ನ ದುರ್ವಿಧಿ ಅವಳನ್ನು ಹಿಂದಕ್ಕೆ—ಬಹಳ ದೂರಕ್ಕೆ ಎಸೆಯಿತು.

ದುಃಖದಲ್ಲಿ ಮೈಮರೆತಿದ್ದವರು ಎಚ್ಚೆತ್ತರು ಮುಂದಿನ ಕಾರ್ಯದ ಅರಿವು ಬಂದು. ಗಿಂಡಿಯ ಶಾಸ್ತ್ರದ ಬದಲು ಗುಂಡಿಯ ಶಾಸ್ತ್ರವಾಯಿತು. ಯಾರೋ ನಾಲ್ಕು ಜನ ರುದ್ರಭೂಮಿಗೆ ಹೋಗಿ ಗುಂಡಿ ತೆಗೆದು ಬಂದರು. ಯಾವ ಬಂಡಿ

ಯಲ್ಲಿ ಪುಟ್ಟಯ್ಯ ತನ್ನ ಜೀವನದ ಜೊತೆಗಾರ್ತಿಯೊಡನೆ ಕುಳಿತು ಊರ ಲ್ಲೆಲ್ಲಾ ಮೆರೆಯಬೇಕಾಗಿತ್ತೋ ಅದೇ ಬಂಡಿಯೇ ಪುಟ್ಟಯ್ಯನನ್ನು ಶಿವನೆಡೆಗೆ ಒಯ್ಯುವ ವಿಮಾನವಾಯಿತು.

ಶಾಸ್ತ್ರಿಗಳು ಮಂಗಳಗೀತೆಯನ್ನು ಹಾಡುವ ಬದಲು ಅಶುಭ ಮಂತ್ರ ಗಳನ್ನು ಕೂರೆಯಬೇಕಾಯಿತು; ಚರಮಗೀತೆಗಳನ್ನು ಗೊಣಗಿದರು. ಹಿರಿ ಯರ ಬೇಡಿಕೆಯಂತೆ 'ಶವ' ದ ಪೂಜೆಗೈದರು. ಗೌರಮ್ಮನಿಗೆ ಉಡುಗೊರೆ ಗೆಂದು ತಂದಿದ್ದ ಒಡವೆ ವಸ್ತ್ರಗಳು ಹಿಂದೆಯೇ ಉಳಿದುವು. ನೂತನ ವಸ್ತ್ರಗಳು- ಪಾಪ, ಅವಕ್ಕೂ ಪುಣ್ಯವಿಲ್ಲ.—ಹೆಣವನ್ನು ಅಲಂಕರಿಸಬೇಕಾಯಿತು.

ಮದುವೆಯ ಮೆರವಣಿಗೆಯ ಹಿಂದೆ ಹೊರಟು ಊರನ್ನು ಸುತ್ತಲು ಬಂದಿದ್ದವರು ಊರ ಹೊರಗಿನ ರುದ್ರಭೂಮಿಗೆ ಶವವನ್ನು ಹಿಂಬಾಲಿಸಿ ಹೊರ ಟರು. ಓಲಗದವರ ರಾಗ ತಾಳ ಬೇರೆಯಾದವು.

ಗಂಡಿನ ಕಡೆಯವರು ಮುಖ ಮುಚ್ಚಿಕೊಂಡು ಕಳ್ಳರಂತೆ ಹೊನ್ನೂರು ಬಿಡಬೇಕಾಯಿತು, ಕಳ್ಳರಂತೆ ಊರು ಸೇರಿದರು—ಒಬ್ಬೊಬ್ಬರೇ.

ಗಂಡನನ್ನು ಹುಡುಕಿಕೊಂಡು ಬರಲು ಹೋದ ಗೌರಮ್ಮ ಅವನಿಗೆ 'ಮಣ್ಣುಹಾಕಿ' ಮನೆಗೆ ಬಂದಳು—ಐದೆತನದ ಕುರುಹುಗಳನ್ನೆಲ್ಲ ದುರ್ವಿ ಧಿಗೆ ಒಪ್ಪಿಸಿ.

ಅಂದಿನಿಂದ ಹೊನ್ನೂರಿನಲ್ಲಿ 'ಗಿಂಡಿಶಾಸ್ತ್ರ' ಇಲ್ಲ. ಗೌರಮ್ಮನ ಮದು ವೆಗೇ ಕೊನೆಗಂಡಿತು.

# ನನ್ನ ಬಂಗಾರಿ

ಉಗಾದಿಯಾಗಿ ಆಗಲೇ ಒಂದೆರಡು ಹದ ಮಳೆ ಬಿದ್ದಿತ್ತು. ಒಕ್ಕಲು ಮಕ್ಕಳು ಹೊಲಗಳನ್ನು ಹಸನು ಮಾಡುವ ಉದ್ಯಮಕ್ಕೆ ಆಗಲೇ ಕೈ ಹಾಕಿದ್ದರು. ಕೂಡಲಿಜಾತ್ರೆ ಮುಗಿದಿರಲಿಲ್ಲ, ರಟ್ಟೆಹಳ್ಳಿ ಜಾತ್ರೆ ಇನ್ನೂ ಬರಲಿತ್ತು.

ನನ್ನ ಚಿಕ್ಕತಮ್ಮ ಶಿವ್ಪೂ ಎಂದ: ಅಣ್ಣಾ, ಮನೇಲಿ ಮೂರೇ ಎತ್ತುಗಳಾಗಿ ಬಿಟ್ಟವು. ಈ ವರ್ಷ ತಲಾರಕ್ಕೆ ಗಿಡ್ಡಗಳೇ ಇಲ್ಲ, ಚಂದಣ್ಣನ್ನಾದರೂ ಮಾರಿ ಎರಡು ಗಿಡ್ಡಗಳನ್ನು ತರೋಣ ರಟ್ಟೆಹಳ್ಳಿ ಜಾತ್ರೆಗೆ ಹೋಗಲೇ?

'ಒಳ್ಳೇ ಬುದ್ಧಿವಂತಕಣೋ, ಮನೆಹುಟ್ಟಿನ ಹೋರಿಕರುವನ್ನು ಮಾರುತ್ತಾನಂತೆ' ಎಂದು ಜಬರಿಸಿದೆ.

'ಹಂಗಾದರೆ ಬೇಸಾಯಾನೇ ಮುರಿದು ಬಿಡೋದೆ? ಮನೆಯಾಗೆ ಒಂದು ಬಿಡಿಗಾಸೂ ಇಲ್ಲ. ಇದ್ದದ್ದನ್ನೆಲ್ಲಾ ಕಳ್ಳಸಂತೇಲಿ ಜೋಳ ಕೊಳ್ಳೋದಕ್ಕೆ ಹಾಕಿದ್ದಾಯಿತಪ್ಪಾ' ಕೊರಗಿನಿಂದ ನುಡಿದ.

'ಸಾಲ ಮಾಡಿದರಾಯ್ತು—ಸೇಂಗಾ ಸುಗ್ಗಿಗೆ ಅವರ ಹಣ ಅವರಿಗೆ ಮುಟ್ಟಿಸೋಣ' ಎಂದೆ.

'ಸರಿ ಬಿಡಪ್ಪ, ಮುಂದಿನ ದಿನ ಮಾನ ಹೆಂಗೋ ಏನೋ. ಕಡೆಗೆ ಸಾಲದವನ ಮನೆ ಆಳಾಗ ಬೇಕಾದೀತು ಗಟ್ಟಿಸಿ ಹೇಳಿಬಿಡಣ್ಣಾ, ರಟ್ಟೆಹಳ್ಳಿಗೆ ಹೋಗಲೋ ಹೇಗೆ?'

'ನಾನು ಹೇಗೆ ಹೇಳಿದರೆ ನಿನಗೆ ಹಿತ? ಬೇಡಕಣೋ ಅಂತ ಹೇಳ್ತಿದ್ದೇನೆ ಮತ್ತೂ ಕಾಡಿಸ್ತೀಯಲ್ಲ! ಚಂದನ್ನ ಮಾರೋದು ಬೇಡ. ಬೇಡಾ. ಬೇಡ! ಗೊತ್ತಾಯ್ತೆ' ಹೀಗೆಂದೆ.

ಅವನು ಮತ್ತೆ 'ಹೂಂ, ಹೋಗಲಿ ಬಿಡು ನಿನ್ನ ಪ್ರೀತಿಯ ಚಂದನ್ನಾದರೂ ಮನೆಬಿಟ್ಟು ಹೊರಡಿಸೋದು ಯಾಕೆ? ಜಾತ್ರೆಗೆ ಹೋಗೋದೂ ಬ್ಯಾಡ; ಸಾಲ ಕೇಳೋದೂ ಬ್ಯಾಡ. ಆ ಹಂಡಾ ಕಳು ಐತಲ್ಲ ಅದನ್ನೇ ಚಂದನ ಜೊತೆಗೆ ತಲಾರಕ್ಕೆ ಕಟ್ಟಿದರಾತು' ಎಂದ. ದನಿಯಲ್ಲಿ ಅಸಮಾಧಾನತುಂಬಿತ್ತು.

"ಅಂ! ಏನು? ಗೋಮಾತೆಯನ್ನ, ಲಕ್ಷ್ಮೀದೇವಿಯನ್ನ ಬೇಸಾಯಕ್ಕೆ ಹೂಡಬೇಕೇ? ಯಾವ ರೌರವ ನರಕಕ್ಕೆ ಬೀಳಬೇಕೂ ಅಂತ, ಹಸುವಿನ ಹೆಗಲ ಮೇಲೆ ನೊಗ ಇಟ್ಟು?" ಎನುತ್ತಲೇ ಥಟ್ಟನೆ ಎದ್ದೆ. ತೋಟದ ಕಡೆಗೆ ಹೊರಟೇಬಿಟ್ಟೆ.

ತೋಟದಲ್ಲೇ ಎಷ್ಟೋ ಹೊತ್ತು ಕುಳಿತೆ ಮಂಕನಾಗಿ. ಮತ್ತೂ ಇದೇ ಹೊಯ್ದಾಟ. ಹಸುವನ್ನು ಹೂಡಲೇ ಕೂಡದೆಂದು ನಿರ್ಧರಿಸಿದೆ. ಸಾಲ ಮಾಡಲೆ?........ಸೇಕಡ ಹದಿನೆಂಟು ಬಡ್ಡಿ. ಮುಂದಿನಕಾಲ ಎಂಥದೋ, ಮೊನ್ನೆತಾನೆ ಸಾಲ ತೀರಿಸಿ ನೆಟ್ಟಗೆ ನಿಂತಿದ್ದೇವೆ. ಮತ್ತೆ ಸಾವುಕಾರರ ದವಡೆ ಯಲ್ಲಿ ಸಿಕ್ಕರೆ 'ಸಾಲಮಾಡಿ ಒಲೆಕೊಂಡ, ಒಲೆಮಾರಿ ಬಡ್ಡಿಕೊಟ್ಟ' ಅನ್ನೋ. ಹಾಗೆ ಆದರೆ? ಚಂದನ್ನ ಮಾರಿಬಿಡಲೇ? ಸಾಧ್ಯವಿಲ್ಲ ಸಾಧ್ಯವೇ ಇಲ್ಲ. ಆ ಯೋಚನೆಯನ್ನೇ ಮನಸ್ಸಿನಲ್ಲಿ ಹೊಗಿಸಲಾರೆ. ಸಾಲ ಚಂದ; ಚಂದ ಸಾಲ. ಹಾಗೆ ಮಾಡಲೊ ಹೀಗೆ ಮಾಡಲೋ? ವಿಾನವೋ, ಮೇಷವೋ? ಎಷ್ಟು ಲೆಕ್ಕಾಚಾರ ಹಾಕಿದರೂ ಮತ್ತೂ ಹಳೆಯ ಮನೆಯೇ, ಮತ್ತೂ ತೂಗು ಮನಸ್ಸೇ........ಛೆ, ಛೆ, ಎಂಥ ದಡ್ಡ ನಾನು. ನಾನು ಶಾಶ್ವತವೇ? ಅವನಾದರೂ ಶಾಶ್ವತವೇ? ಹುಟ್ಟಿದ ಕರುಗಳೆಲ್ಲಾ ಹುಟ್ಟಿದ ಮನೆಗಳಲ್ಲಿಯೇ ಇದ್ದರೆ ಪ್ರಪಂಚದ ವ್ಯವಸಾಯ ಸಾಗುವುದಾದರೂ ಹೇಗೆ? ನಮ್ಮ ಅವನ ಋಣ ಇದ್ದಷ್ಟು ದಿನ ಆಯ್ತು........ಆಯ್ತೋ ಋಣವೆಂಥದು? ಸುಮ್ಮನೆ ಹಾಳು ಕಕ್ಕುಲಿತೆ. ಯಾರಿಗೆ ಯಾರೂ ಇಲ್ಲ. ಎಂಥ ದಡ್ಡ ನಾನು! ಒಂದು ಹೋರಿ ಕರುವನ್ನು ಮಾರುವುದಕ್ಕೆ ಇಷ್ಟುದೂರ ಆಲೋಚನೆ ಮಾಡಬೇಕೆ? ಅದನ್ನು ಆ ಮೂಕ ಜೀವಿಯನ್ನು ಮಾರಿ, ಬೇರೆರಡು ಮೂಕಜಂತುಗಳನ್ನು ಕೊಂಡು ತರುವುದು, ಇದೊಂದು ಮಹಾ ಸಮಸ್ಯೆಯೇ? ಅದನ್ನು ಮಾರಿಯೇ ಬಿಡೋದು ಎಂದು ಗಟ್ಟಿಯಾಗಿ ಹೇಳಿಕೊಂಡೆ. ಒಬ್ಬನೇ ಇದ್ದರೂ ಗಟ್ಟಿಯಾಗಿ ಹೇಳಿಕೊಂಡೆ, ಕಾರಣ ನನ್ನ ಹೃದಯಕ್ಕೂ ಕೇಳಿಸಲೆಂಬುದು. ಮನೆಗೆ ಬಂದೆ.

ಮನಸ್ಸಿನ್ನೂ ನಿರ್ಮಲವಾಗಿರಲಿಲ್ಲ. ಹಾಗೇ ಅಡ್ಡಾಡುತ್ತ ಬಂದು ಊರ ಅಗಸೆಯಬಳಿ ಅಶ್ವತ್ಥಕಟ್ಟೆಯೊಂದರ ಮೇಲೆ ಕುಳಿತೆ.

ಅಡವಿಯ ಕಡೆಯಿಂದ ದನಕರುಗಳು ಬರುತ್ತಿದ್ದುವು, ಇದರ ಸೂಚನೆಯಾಗಿ ಕೆಂದೂಳು ಮುಗಿಲಿಗಡರುತ್ತಿತ್ತು. ಕೆಲವು 'ಗುದ್ದೆ'ಗಳನ್ನು ಕಟ್ಟಿ

ಕೊಂಡು ಮಂದಗತಿಯಲ್ಲಿ ಬರುತ್ತಿವೆ; ಕೆಲವು ಹಸುಗಳು 'ಅಂಬಾ' ಎನ್ನುತ್ತ ಓಡೋಡಿ ಬರುತ್ತಿವೆ, ಕೈಗೆಬಂದ ದೊಡ್ಡ ಮಕ್ಕಳೊಂದಿಗೆ ನಡೆದು ಬರುತ್ತಿವೆ ನಾಲ್ಕಾರು ಮುದಿ ಹಸುಗಳು. ಕನ್ನೆಯಾವಿನ ಬೆನ್ನುಹತ್ತಿ ಬರುತ್ತಿದೆ ಒಂದು ಎಳಸು ಹೋರಿಕರು. ಕೊಟ್ಟಿಲ ಹಸುಗಳು ಚಿನ್ನಾಟವಾಡುತ್ತ 'ಅಂಬಾ' 'ಅಂಬಾ' ಎಂದು ಕೂಗುತ್ತ ಊರ ಅಗಸೆ ಹೊಗುತ್ತಿವೆ. ಆಗಲೇ ಊರೊಳಗಿನ ಕರುಹಟ್ಟಿಯಿಂದ 'ಅಂಬಾ' 'ಅಂಬಾ' ಮಾರುದನಿಯೂ ಬಂತು. ಕರುಗಳು ತಾಯಿಯರನ್ನು ಕೂಗಿ ಕೂಗಿ ಕರೆಯುತ್ತಿವೆ.

ನಾನು ಬೆಪ್ಪಾದೆ. ಮೂಕನಂತೆ ಕುಳಿತುಬಿಟ್ಟೆ. ಚಂದನನ್ನು ಮಾರಬೇಕೆಂಬ ನಾಲಗೆಗೆ ಹಲ್ಲುಗಳು ಶಿಕ್ಷೆ ಮಾಡಿದುವು. ಚಂದಣ್ಣ ಮತ್ತು ಅವನ ತಾಯಿ ಇವರ ಚರಿತ್ರೆಯೆಲ್ಲಾ ಅಲೆಯಲೆಯಾಗಿ ನೆನಪಿಗೆ ಬಂತು.

* * * *

ನಮ್ಮೂರು ಬಯಲುಸೀಮೆಯ ಸೆರಗು, ಮಲೆನಾಡಿನ ಮೇರೆ. ಹಸಿರು ಹಸಿರುಜೋಳದ ಹದುಳು ತಕ್ಕೆಯಲ್ಲಿದೆ. ಬೈಗಿನಹೊತ್ತು ಗುಡ್ಡದ ನೆಳಲು ನಮ್ಮೂರಿಗೂ ಹಬ್ಬುತ್ತದೆ. ದನಕರುಗಳೇ ಆ ಊರಿನ ವಿಶಿಷ್ಟ ಸೌಭಾಗ್ಯ; ಉಸಿರು. ಮನೆಮನೆಗೂ ತುರುಮಂದೆ ಇರುವುದು. ಅದರಲ್ಲಿಯೂ ನಮ್ಮ ತುರುಹಟ್ಟಿಯೆಂದರೆ ಊರಿಗೊಂದು ಕಳಸ. ನಮ್ಮ ತಾತ ಮುತ್ತಾತಂದಿರ ಕಾಲದಿಂದಲೂ ನಮ್ಮ ತುರುಹುಟ್ಟಿ ಹಸರಾಗಿದೆಯಂತೆ. ಆದುದರಿಂದಲೇ ನಾವು ಊರ ಗೌಡರಾಗಿದ್ದರೂ 'ಹಟ್ಟಿಯವರ' ಮನೆಯವರೇ! ಮದುವೆ ಮುಂಜಿಗಳಲ್ಲಿ 'ಗೌಡಿಕೆ ವೀಳಯದ' ದ ಜೊತೆಗೆ 'ಹಟ್ಟಿಯ ವೀಳಯ' ವೂ ನಮ್ಮ ಮನೆಯವರಿಗೇ ಸಲ್ಲುತ್ತದೆ.

ನಮ್ಮ ಹಸುಗಳು ಗಿಡಕ್ಕೆ ಮೇಯಲು ಹೊರಟ ಮೇಲೆಯೇ ಇನ್ನುಳಿದ ಆವುಗಳೂ ಆವಿನ ಕರುಗಳೂ ತಮ್ಮ ಗೂಡಿನಿಂದ ಹೊರಡುವುದು. ನಮ್ಮೂರಲ್ಲಿ ಯಾರಾದರೂ ಸೋಮಾರಿ ಹುಡುಗರು ಒಪ್ಪೊತ್ತಿನ ಬೇಸಾಯಕ್ಕೆ 'ಎತ್ತು ಬಿಡುವುದಕ್ಕೆ' ತಡಮಾಡಿದರೆ ಮುದುಕರು ಹೇಳುವವಾಡಿಕೆ "ಎತ್ತುಬಿಡ್ರೋ ತಮ್ಮ, ಹಟ್ಟೇರಮನೆ ದನ ಆಗಲೇ ಆಡಾಕ್ಹೊಂಡವು" ಎಂದು. ಅಷ್ಟೊಂದು 'ಗಳಿಗೆ ಹೆಚ್ಚು ಗಳಿಗೆ ಕಡಿಮೆ' ಇಲ್ಲದೆ ಹೊರಡುತ್ತಿದ್ದುವು ನಮ್ಮ ಗೋವುಗಳು ಗಿಡಕ್ಕೆ. ನನ್ನ ಬಂಗಾರಿ ನಮ್ಮ ತುರುಮಂದೆಯ ಹಿರಿಯಕ್ಕನಾದ

ಮೇಲಂತೂ ಹೇಳತೀರದು, ಒಂದು ಅರಗಳಿಗೆ ತಡವಾದರೂ ಕಾಲು ಕೆದರುತ್ತ ದಿಡಕಿಹಾಕಿ (ಒದರುತ್ತ) 'ಅಂಬಾ' ಎಂದು ಕೂಗುವಳು ಬನಶಂಕರಿಯನ್ನು. ಬಂಗಾರಿ ನಮ್ಮ ಹಸುಗಳಿಗೇ ಏಕೆ, ಊರ ಎಲ್ಲ ಹಸುಗಳ ಕಣ್ಗೊಂಬೆ, ಬಂಗಾರ. ಅವಳಿದ್ದರೆ ದನಕಾಹಿಗಳೇ ಬೇಡ. ಆದರೂ ನಾನು ಶಾಸ್ತ್ರಕ್ಕೆ ಮಾತ್ರ ಅವಳನ್ನು ಅನುಸರಿಸಿ ಹೋಗುವೆನು. ಇದಲ್ಲದೆ ಈಕೆ ಆಡುಂಬೊಲಕ್ಕೆ ಹೊರಡುವುದೇ ಇಲ್ಲ—ನಾನಿಲ್ಲದೆ. ಊರಿನ ಇನ್ನುಳಿದ ದನಗಾಹಿಗಳೂ ದನಗಳೂ ನನ್ನಂತೆಯೇ ಬಂಗಾರಿಯ ಹಿಂದೆಯೇ ಬರುವುದು; ಏಕೆಂದರೆ ಎಲ್ಲರಿಗೂ ಗೊತ್ತು ಬಂಗಾರಿಯಿದ್ದರೆ ಹಸುಗಳು ಸುರಕ್ಷಿತವಾಗಿರುವುವೆಂದು. ಅವಳ ರೂಪ, ಗುಣ, ಘನತೆಗಳಿಗೆ ಮೆಚ್ಚಿ, ಊರವರೆಲ್ಲಾ ಅವಳಿಗೆ 'ಕಾಮಧೇನು' ಎಂದು ಕರೆಯುತ್ತಿದ್ದರು.

ಬಂಗಾರಿ ಊರ ಎಲ್ಲ ಹಸುಗಳಿಗೂ ಹೆಗ್ಗಡತಿಯಾಗಿ ಮುಂದೆ ಹೊರಟರೆ ಅವಳನ್ನು ಬಳಸಿಕೊಂಡು ಕೆಲವು ಹಸುಗಳು ಹೋಗುವುವು—ಬಂಗಾರಿಯ ಮೈಗಾವಲಿಗೋ ಎಂಬಂತೆ. ಅವರ ಹಿಂದೆ ಇನ್ನುಳಿದ ಹಸುಗಳು ಗುಂಪು ಗುಂಪಾಗಿ ಹೋಗುವುವು. ಕೂಳು ಕುಡುಗೋಲು ತೆಗೆದುಕೊಂಡು ತಂಡತಂಡವಾಗಿ ಹೊಲಗಳಿಗೆ ಹುಲ್ಲು ಕೊಯ್ಯಲು ಹೋಗುವ ಹಳ್ಳಿಯ ಹರದೆಯರಂತೆ. ನಾವು ತುರುಗಾಹಿಗಳು ಹತಾರಸಹಿತವಾಗಿ ಕವಳ ಕುಡುಗೋಲು ಗೊಂಗಡಿ ತೆಗೆದುಕೊಂಡು ಹಿಂಬಾಲಿಸಿಕೊಂಡು ಹೋಗುವೆವು—ಹಸುಗಳನ್ನು ಒಂದು ಮಾರುದೂರ ಮುಂದೆಬಿಟ್ಟು.

ಗುಡ್ಡವು ನಮ್ಮೂರಿಗೆ ಅಷ್ಟು ಸಮೀಪದಲ್ಲಿದ್ದರೂ ಹಸುಗಳೇನೋ ಒಂದೆರಡು ಓರೆಗಳನ್ನಾದರೂ ಹತ್ತಿ ಇಳಿಯಬೇಕು. ಆ ಹಾದಿ—ತಿರುಗಿ, ಮುರಿದು, ಹೊರಳಿ, ಹತ್ತಿ ಇಳಿದು, ಹೊಯ್ಲು ಹಿಡಿದು 'ಸರ್ಕಸ್' ಮಾಡುತ್ತಲೇ ಮುಂದುವರಿಯಬೇಕು ಆ ಹಾವಿನಂಥ ಹಾದಿಯಲ್ಲಿ. ಮನುಷ್ಯರಿಗೇ ಗೋಳು! ಅಂತಹ ಕಲ್ಲುದಾರಿಯಲ್ಲಿ ಆ ಗೋವುಗಳು ನಡೆಯುತ್ತಿರುವುದನ್ನು ನೋಡಿದಾಗ "ಮೂಕಜಂತುಗಳಿಗೆ ಬುದ್ಧಿಯಿಲ್ಲ ಎನ್ನುವವರ ತಲೆಯಲ್ಲೇ ಮೆದುಳಿಲ್ಲ" ಎನ್ನುವಿರಿ ನೀವೇ. ನೂರಾರು ವರುಷಗಳಿಂದ ಜನಗಳು ದನಗಳು ತುಳಿದುತುಳಿದು, ಅನೇಕಸಾರಿ ಜನ, 'ಜಾನುವಾರುಗಳು' ಜಾರಿಬಿದ್ದು 'ಫಜೀತಿ' ಯಾಗಿದೆ ಆ ಹಾದಿ. ನಮ್ಮಂಥ ಅನುಭವಿ ದನಗಾಹಿಗಳೇ ಹಲವು

ವೇಳೆ ಜಾರಿಬಿದ್ದಿದ್ದೇವೆ. ಅಂಥಹ ಎಡವಟ್ಟು ಹಾದಿಗಳಲ್ಲಿ ಹಸುಗಳು ನಡೆಯು ತ್ತಿರುವುದನ್ನು ಒಂದು ಎತ್ತರವಾದ ಮೊರಡಿಯ ಮೇಲೆ ನಿಂತು ನೋಡಬೇಕು! ಆ ದೃಶ್ಯ—ಅದುವೇ ಶ್ರಾವಣಮಾಸದಲ್ಲಿ ಕಣ್ಣಿಗೊಂದು ಹಿರಿಯುಣಿಸು.

ಬಂಗಾರಿ ದಿಬ್ಬಣದ ನಡಗೆಯಲ್ಲಿ ಹೆಜ್ಜೆಯ ಮೇಲೆ ಹೆಜ್ಜೆಯಿಡುತ್ತ ಜಾರಿಕೆಯಿಲ್ಲದ ತಾವನ್ನೇ ಆರಿಸಿ ಅಲ್ಲಿ ಕಾಲಿಡುತ್ತ ಹೋಗುವಳು, ಅವಳ ಹಿಂದೆ ಒಬ್ಬಳು, ಅವಳ ಹಿಂದೆ ಇನ್ನೊಬ್ಬಳು. ಹೀಗೆ ಸಾಲುಗಟ್ಟಿಕೊಂಡು ಹೋಗುವುವು ಇರುವೆಗಳಂತೆ. ಬಂಗಾರಿ ಹಿರಿಯಕ್ಕನಾಗುವುದಕ್ಕಿಂತ ಮೊದಲು ಎಷ್ಟು ಹಸುಗಳು ಜಾರಿಬಿದ್ದು ಕಾಲುಮುರಿದುಕೊಂಡಿದ್ದುವೋ!

ಬಂಗಾರಿ ಹುಟ್ಟಿದ್ದು ನಾನಿನ್ನೂ ಸಣ್ಣವನಿದ್ದಾಗ. ಆಕೆ ಹುಟ್ಟಿದಾಗಿನಿಂದ ನನ್ನ ಒಡನಾಡಿ. ಅದಕ್ಕೆ ನಾನೇ ಮುಸುರಿ ಮುರವು ತಿನ್ನಿಸುತ್ತಿದ್ದೆ. ಆಕೆ ದೊಡ್ಡವಳಾದ ಮೇಲೆ ಹಸುಗಳಿಗೆಲ್ಲಾ ಒಡತಿಯಾದಳು; ನಾನು ಗೋಪಾಲನಾದೆ. ಆಕೆಯನ್ನು ನೋಡಿದ ಮೇಲೆ ಮತ್ತೆ ಕಾಮಧೇನುವನ್ನು ನೋಡಬೇಕೆಂಬ ಹಂಬಲವೇ ಹೋಗಿಬಿಡುವುದು. ನೈಬಣ್ಣ ಮಲ್ಲಿಗೆಯ ಹೂವು. ಅದಕ್ಕೇ ನಮ್ಮಣ್ಣ ಆಕೆಯನ್ನು ಹಾಲಿ ಎಂದೇ ಕರೆಯುತ್ತಿದ್ದರು. ಬಂಗಾರಿಗೆ ಹಣೆಚುಕ್ಕೆ, ಹೂಬಾಲ. ಶಾಸ್ತ್ರಬಲ್ಲವರು "ಈಕೆ ಕಲ್ಯಾಣಿ ಜಾತಿಗೆ ಸೇರಿದವ"ಳೆಂದು ಹೇಳಿದ್ದರು. ಹೆಂಗಸರಿಗೂ ಈಕೆಯನ್ನು ಕಂಡರೆ ಜೀವ. ಮಕ್ಕಳ ಫಲ ಬೇಕಾದ ಹೆಂಗಳೆಯರೆಲ್ಲಾ ಬಂದು ಬಂಗಾರಿಯನ್ನು ಪೂಜಿಸಿ ಪ್ರದಕ್ಷಿಣೆ ಮಾಡಿ ಮನಸ್ಸಿನಲ್ಲಿಯೇ ಏನೋ 'ಪಿಟಿಪಿಟಿ' ಗುಟ್ಟಿಕೊಂಡು ಹೋಗುವರು.

ಬಂಗಾರಿ ಒಂದು ಗಂಡುಮಗುವನ್ನು ಹೆತ್ತಿದ್ದಾಳೆ. ಅವನೇ 'ಚಂದ.' ಚಂದಣ್ಣ ಬಂಗಾರಿಯ ಜೀವಜೀವ. ಅವನು ಒಂದು ಅರೆಕ್ಷಣ ಮರೆಯಾದರೂ ಬಂಗಾರಿಗೆ ಪ್ರಾಣಹೋದಂತೆ ಆಗುವುದು. ಕರುವು ಅಮ್ಮನೊಂದಿಗೆ ಆಟವಾಡುತ್ತ ಇರುವಾಗ ಹುಡುಗಾಟ ಚಿನ್ನಾಟದಲ್ಲಿ ಅಮ್ಮನನ್ನು ಬಿಟ್ಟು ಸ್ವಲ್ಪ ದೂರ ಓಡಿಹೋದರೆ ಬಂಗಾರಿ ಮಗನನ್ನು ತಡೆಯುತ್ತಿರಲಿಲ್ಲ. ಹಾಗೆಲ್ಲಾ ತಡೆದರೆ ಮಗುವಿನ ಆಟಕ್ಕೆ ಕಲ್ಲುಹಾಕಿದಂತೆ ಎಂದು ಭಾವಿಸುವಳು. ಆದರೂ ಅವನನ್ನೇ ಅನುಸರಿಸಿ ಓಡುವಳು 'ಬಸವನ ಹಿಂದೆ ಬಾಲದಂತೆ' ರಾತ್ರಿಯೋ—ತನ್ನ ಅಕ್ಕರೆಯನ್ನೇ ಹಾಸಿ ತನ್ನ ತಾಯ್ನೋಟವನ್ನೇ ಹೊದಿಸಿ ಮಲಗಿಸು

ವಳು. ಜೋಗುಳವನ್ನೂ ಹಾಡುತ್ತಿದ್ದಳೋ ಏನೋ. ನಮಗೆ ಹೇಗೆ ಗೊತ್ತಾಗಬೇಕು ಆಕೆಯ ಭಾಷೆ! ಕಂದನು ನಿದ್ರಿಸಿದರೆ ತಾನೂ ನಿದ್ರಿಸಿದಂತೆಯೇ ಎಂದು ಆ 'ಹುಚ್ಚಿ' ಯ ಭಾವನೆ.

ಒಂದುದಿನ ನಮ್ಮೂರ ಬೇಣದಲ್ಲಿ ನಡೆದ ಸ್ವಾರಸ್ಯವಾದ ಸಂಗತಿಯನ್ನು ಹೇಳುತ್ತೇನೆ. ಅಂದು ಚಂದನೂ ಬಂದಿದ್ದ ಗಿಡದಲ್ಲಿ ಮೇಯುವುದಕ್ಕೆ. ಅವನು ಗಿಡವನ್ನೂ, ಗಿಡದ ಹಸುರನ್ನೂ ಕಂಡಿದ್ದು ಅದೇ ಮೊದಲಬಾರಿ. ಬನದೇವಿಯ ರಮ್ಯ ಸುಂದರ ರೂಪನ್ನು ನೋಡಿ ಮರುಳಾಗಿ, ಹಸಿರುಹುಲ್ಲು ಕೈಬೀಸಿ ಕರೆದೆಡೆಗೆ ಹೋಗುವನು. ಬಾಯಿಗೆ ಸಿಕ್ಕಷ್ಟನ್ನು ಹರಿದು ತಿನ್ನುವನು, ಮುಂದಕ್ಕೆ ತೆರಳುವನು. ಹೀಗೆಯೇ ಆಡುತ್ತ ದನಗಳ ಒಡ್ಡನ್ನು ಬಿಟ್ಟು ಬಹುದೂರ ಹೋಗಿಬಿಟ್ಟಿದ್ದಾನೆ. ಬಂಗಾರಿಯೂ ತನ್ನ ಅಚ್ಚುಮೆಚ್ಚಿನ ಕೆಳದಿಯರೊಡನೆ ಮೇಯುತ್ತ ತನ್ನನ್ನೂ ಅಂದು ಮರೆತಿದ್ದಳೆಂದು ತೋರುತ್ತದೆ. ತನ್ನ ಬಳಗದವರು ಅಷ್ಟೊಂದು ಉಪಚರಿಸುತ್ತಿರುವಾಗ, ಊಳಿಗದವರು ಓಲೈಸುತ್ತಿರುವಾಗ ಬಿಗುಮಾನ ಬಂದು ಕಣ್ಣು ಮನಸ್ಸುಗಳನ್ನು ಮುಸುಕಿರಬೇಕು. ಚೆಂದಣ್ಣ ಮಾಯವಾಗಿರುವುದರ ಅರಿವೇ ಅವಳಿಗಿಲ್ಲ. ಹೀಗಾಗಲು ಇನ್ನೂ ಒಂದು ಕಾರಣ ಉಂಟು. ಅವನು ಆಡುವುದಕ್ಕೆ ಅಡವಿಗೆ ಬಂದದ್ದು ಅದೇ ಮೊದಲಬಾರಿತಾನೆ. ಅವನು ಮನೆಯಲ್ಲಿ ಸುರಕ್ಷಿತವಾಗಿದ್ದಾನೆಂದೇ ಇವಳ ತಿಳಿವು. ಹುಚ್ಚಿ ಬಂಗಾರಿ ತನ್ನ ಮನಸ್ಸಿನಲ್ಲಿಯೇ ಗುಣಾಕಾರ ಹಾಕುತ್ತಿದ್ದಿರಬೇಕು: ತನ್ನ ಕೂಸು ಈಗ ತನ್ನನ್ನು ನೆನೆಸಿಕೊಂಡಿರಬಹುದು; ಅಥವಾ ಓರಗೆಯ ಕಂದಗಳೊಡನೆ ಚಿಣ್ಣಾಟವಾಡುತ್ತಿರಬಹುದು ಎಂದು. ಇದು ಕರುವನ್ನು ಊಡಿಸುವ ಹೊತ್ತು ಎಂದು ತನ್ನಲ್ಲೇ ತಾನು ಅಂದುಕೊಳ್ಳುತ್ತಿದ್ದಾಳೆ. "ನನ್ನ ಬಂಗಾರದ ಮುಖವನ್ನು ಎಂದಿಗೆ ನೋಡೇನೋ" ಎಂದೂ ಹಂಬಲಿಸುತ್ತಿದಾಳೆ.

ನಾವು ತುರುಗಾಹಿಗಳು ಎಂದಿನಂತೆಯೇ ಗೋವುಗಳನ್ನೆಲ್ಲಾ ಅದರ ಹೆಗ್ಗಡತಿಗೊಪ್ಪಿಸಿ ಹಸಿರು ಮರ-ಮೆಳೆಗಳ ನಾಲ್ಕು ಗೋಡೆಗಳ ನಡುವೆ ಬನದಮ್ಮ ನಮಗಾಗಿಯೇ ಹಾಸಿದ್ದ ಹಸಿರುಗಂಬಳಿಯ ಮೇಲೆ ಹುಲ್ಚೆಂಡಾಡಿ ದಣಿದು ಹೊಟ್ಟೆ ಎಚ್ಚರಿಸಿದ ಮೇಲೆ ಬಂದೆವು, ಊಟಮಾಡುವುದಕ್ಕೆಂದು.

ಊಟಮಾಡುವ ಮುನ್ನ ನಮ್ಮ ನಮ್ಮ ಹಸುಗಳನ್ನು ನೋಡಿಕೊಂಡು ಬರುವ ಪದ್ಧತಿ. ಆಕಳುಗಳನ್ನು ಅವರವರ ಹೆಸರು ಹಿಡಿದು ಕರೆಯುತ್ತ

ಕಾರ್ಗಾಲಪ್ಪನ ಕಣಿವೇಯ ಒಳಗೇ ಮಾಯದ ಮಿಂಚು ಮಿಂಚೀತೋ
ಮಾಯದಮಿಂಚು ಮಿಂಚಿದ್ದ ಕಂಡು ಮಾಯ ಗುಡುಗೂ ಗುಡುಗೀತೋ
ಹಾ, ಮಾಯಾದ ಗುಡುಗೂ ಗುಡುಗೀತೋ
ಮಾಯಾದ ಗುಡುಗೂ ಗುಡುಗೀತೋ

ಹೀಗೆಂದು ಒಂದೊಂದುಸಾರಿ ಪದ 'ಕೂಗುತ್ತ' ಮನಸ್ಸಿಗೆ ಬಂದಹಾಗೆ ಕುಣಿಯುತ್ತ ಹಸುಗಳಿದ್ದೆಡೆಗೆ ಹೊರಟೆವು.

ನಮ್ಮ ಹಿಂಡಿನಲ್ಲಿ ಚಂದನಿರಲಿಲ್ಲ, ದಿಗಿಲುಬಿದ್ದೆ, ಅವನನ್ನು ಹುಡುಕಲಾರಂಭಿಸಿದೆ. ನಮ್ಮದೇ ಆದ ಒಂದು ರೀತಿಯ ವಿಲಕ್ಷಣ ಧ್ವನಿಯಿಂದ 'ಒದರುತ್ತ' ಚಂದನನ್ನು ಕೂಗಿದೆ. ಜನರನ್ನು ಕೂಗುವಂತೆ ಅವನ ಹೆಸರು ಹಿಡಿದೂ ಕೂಗಿದೆ. ಆಗ ಬಂಗಾರಿಗೆ ಎಚ್ಚರವಾಯಿತು. ಮಗನು ಮಗ್ಗುಲಲ್ಲಿರಲಿಲ್ಲ. ಅವಳಿಗೆ ಜೀವವೇ ಹೋಯ್ತು. 'ಅಂಬಾ, ಅಂಬಾ' ಎಂದು ಆರ್ಭಟಿಸುತ್ತ ಅಡವಿಯನ್ನೆಲ್ಲಾ ನೋಡಿದಳು. ಮೆಳೆಮೆಳೆಯನ್ನೂ ಹೊಕ್ಕು ನೋಡುವಳು. ಬುಗುರಿಯಂತೆ ತಿರುಗಿದಳು ವನವನ್ನೆಲ್ಲಾ. ಹುಡುಕಿದಳು ಜಗವನ್ನೇ ಜಾಲಾಡಿ, ಮೈಯೆಲ್ಲ ಕಣ್ಣಾಗಿ. ಮಗುವಿನ ಇನಿದನಿಯನ್ನು ಆಲಿಸುತ್ತಾಳೆ ಮೈಯೆಲ್ಲ ಕಿವಿಯಾಗಿ. ಎಲ್ಲಾದರೂ ಸ್ವಲ್ಪ 'ಸರಕ್' ಎಂದರೆ ಸಾಕು, ಕಂದನೇನೋ ಎಂದು ತಿಳಿದು ಕಿವಿಯ ನಿಮಿರಿಸಿಕೊಂಡು ಕಣ್ಣ ಕೆಕ್ಕರಿಸಿ ನೋಡುವಳು ಆ ಸಪ್ಪಳ ಬಂದ ದಿಕ್ಕನ್ನು. ಬಂಗಾರಿಯ ಆ ಗೋಳು ಗುಡುಗಾಟ ಗೋರಾಟವನ್ನು ನೋಡಿ ನನಗೆ ಬಹಳ ನಾಚಿಕೆಯಾಯ್ತು. ಚಂದನನ್ನು ಎಂದೂ ಇಲ್ಲದೆ ಇಂದೇಕೆ ಕರೆದುಕೊಂಡು ಬಂದೆ, ಮೊದಲ ದಿನವೇ ಹೀಗಾಗಬೇಕೆ ಎಂದು ಬಹಳ ಕೊರಗಿದೆ. ಅಲ್ಲದೆ ನನ್ನ ಬಂಗಾರಿಯ, ನನ್ನ ಒಡನಾಡಿಯ, ನನ್ನ ಕಣ್ಗೊಂಬೆಯ ಕಂದಮ್ಮ ಮಾಯವಾದುದು ನನಗೇನೂ ಕಡಮೆ ನೋವನ್ನುಂಟುಮಾಡಲಿಲ್ಲ. ಮೆಳೆಮೆಳೆಯನ್ನೂ ಬೆದಕಿದೆ, ಸಂದಿಗೊಂದಿಗಳಲ್ಲೆಲ್ಲಾ ನುಸಿದೆ, ಚಂದನನ್ನು ಕಾಣಲಿಲ್ಲ. ಆಕೆಯೂ ಹುಲ್ಲು ಹೊಧರು, ಗಿಡಬಳ್ಳಿ ಮರಪೋಪುಗಳನ್ನೆಲ್ಲಾ ಕೇಳುವಂತಿತ್ತು "ಕಂಡಿರಾ

ಚಂದನನು" ಎಂದು. ಗಾಢವಾದ ಅವಳ ಅಳಲನ್ನು ಕಂಡ ಮೃಗಪಕ್ಷಿಗಳು "ನಿನ್ನ ಕರುವನ್ನು ಕಾಣಲಿಲ್ಲಮ್ಮ" ಎಂದು ಉಸುರುವಂತೆ ಕಾಣುತ್ತಿತ್ತು.

ಆದರೆ ನಾನೂ ಬಂಗಾರಿಯೂ ಪಡುಗಡೆಯ ಮೂಲೆಯನ್ನೇ ಮರೆತಿದ್ದೆವು. ಕಂದನ ಪುಟ್ಟಪುಟ್ಟ ಹೆಜ್ಜೆಗಳು ನನ್ನ ಕಣ್ಣಿಗೆ ಬಿದ್ದುವು. ಆ ಹೆಜ್ಜೆಗಳ ಗುರುತನ್ನೇ ಅನುಸರಿಸಿ ನಡೆದೆ. ಬಹುದೂರ ನಡೆದೆ. ದೂರದಲ್ಲಿ ಹಸಿರು ಹಿನ್ನೆಲೆಯಲ್ಲಿ ಏನೋ ಬೆಳ್ಳಗೆ ಕಾಣಿಸಿತು. ಶ್ರಾವಣಮಾಸದಲ್ಲಿ ಮೊಳಕಾಲು ಮುಳುಗುವಷ್ಟೇ ಎತ್ತರ ಬೆಳೆದ ಹಸಿರು ಜೋಳದ ಎಳೆಯ ಸಸಿಗಳ ನಡುವೆ, ಚಂದ್ರಿಕೆಯ ನೂಲಿನಿಂದಲೇ ನೆಯ್ದ ಬಿಳಿಯ 'ಪತ್ತಲ'ವನ್ನುಟ್ಟು ಬಾಗಿ ಹುಲ್ಲೊಯ್ಯುತ್ತಿರುವ ಬಿಳಿಯ ಹುಡುಗಿಯಂತೆ. ಆ ಎಡೆಗೆ ಹೋದೆ. ಅಲ್ಲೇನೂ ಬನದೇವಿಯಿರಲಿಲ್ಲ. ಚಂದನೇ ಇದ್ದ. ತೊಂದರೆಯಿಲ್ಲದೆ ಬಾಯ್ಗೆ ಸಿಗುವಷ್ಟು ಎತ್ತರವಾಗಿ ಬೆಳೆದ ಹುಲ್ಲಿನಲ್ಲಿ ನಿಂತಿದ್ದ—ಒಂದು ಮೊಳೆಯ ಮಗ್ಗುಲಲ್ಲಿ.

ಪಾಪ! ಮಗು ಚೆಂದ, ತಾಯನ್ನೂ ತನ್ನವರನ್ನೂ ಕಳೆದುಕೊಂಡು ಹುಡುಕಿಹುಡುಕಿ ಸಾಕಾಗಿ, ಬೆದರಿ ಬೆಂಡಾಗಿ ಮಯ್ಯನ್ನೆಲ್ಲಾ ಒಂದುಹಿಡಿ ಮಾಡಿಕೊಂಡು ನಿಂತಿದ್ದ. ನನ್ನನ್ನು ನೋಡಿದೊಡನೆಯೇ ಮೊಗವರಳಿತು. ಕಣ್ಣು ನಕ್ಕವು. ಆದರೂ ನಾನು ಹತ್ತಿರ ಹೋದೊಡನೆ ದೂರ ಓಡಿದ. ಎಷ್ಟುದೂರ? ತನ್ನ ಕಣ್ಣಿಗೆ ನಾನು ಮರೆಯಾಗದಿರುವಷ್ಟುದೂರ. ಮತ್ತೆ ಹತ್ತಿರಕ್ಕೆ ಹೋಗಲು ಅದೇ ಆಟವನ್ನೇ ಹೂಡಿದ. ಹಿಂಡನ್ನಗಲಿ ತಪ್ಪಿಸಿಕೊಂಡುದಕ್ಕಾಗಿ ಏಟುತಿನ್ನಬೇಕಾಗುವುದೇನೋ ಎಂದು ಹೆದರಿ ಹಾಗೆ ಮಾಡುತ್ತಿದ್ದಾನೆಂದು ಸುಲಭವಾಗಿ ಊಹಿಸಬಹುದಾಗಿತ್ತು; ಕರುವು ಓಡುತ್ತಿರುವಾಗ ಅದರ ಬಾಲ ಮೇಲಕ್ಕೆದ್ದಿರಲಿಲ್ಲ. ನಾನು ಏನೇನೋ ಉಪಾಯ ಮಾಡಿ, ಅವನ ಭಾಷೆಯಲ್ಲಿಯೇ ಮಾತಾಡಿ, ಹೆದರಬೇಡ ಬಾಪ್ಪ ಎನ್ನುತ್ತ ರೊಟ್ಟಿಯ ಆಸೆ ತೋರಿಸಿದೆ. ಆಗ ಹೆದರಿಕೊಂಡು ಹೆದರಿಕೊಂಡು ಬಂದ ನನ್ನೆಡೆಗೆ—ಮನಸ್ಸನ್ನು 'ಬಿಗಿಹಿಡಿ'ದುಕೊಂಡು; ಏಟುತಿನ್ನುವುದಕ್ಕೆ ಶರೀರವನ್ನು ಸಿದ್ಧಮಾಡಿಕೊಂಡು. ನಾನೇಕೆ ಹೊಡೆಯಲಿ! ಸಿಕ್ಕಿದ್ದೇ ಸಾಕೆಂದು ರೊಟ್ಟಿಯನ್ನು ಕೊಟ್ಟು 'ಬಾ' ಎಂದು ಕರೆಯುತ್ತ ಬಂಗಾರಿಗೆ ಸುದ್ದಿ ಹೇಳಲು ಓಡಿದೆ. ಚಂದನೂ ನನ್ನನ್ನು ಹಿಂಬಾಲಿಸಿದ.

ಬಂಗಾರಿ ಇನ್ನೂ ಪೊದೆಪೊದೆಯನ್ನೂ ತಡಕುತ್ತಲೇ ಇದ್ದಳು. ಕಂದಮ್ಮನನ್ನು ಕೂಗುತ್ತಲೇ ಇದ್ದಳು. ನನ್ನ ದನಿಯನ್ನು ಕೇಳಿದವಳೇ ನೋಡಿದಳು—ಕಂದನನ್ನೂ ನನ್ನನ್ನೂ. ತನಗೆ ಉಸಿರುಬಂತು, ಕಣ್ಣು ಬಂದುವು. ಮರುಕಳಿದ್ದ ಅವಳ ಬೇನೆಗಳೆಲ್ಲಾ ಬಯಲಾದುವು—ಕಂದ ಚೆಂದನನ್ನು ಮತ್ತೊಮ್ಮೆ ಹಡೆದಷ್ಟು ಆನಂದವಾಯ್ತು. ಚಂದನೆಡೆಗೆ ಮಿಂಚಿ ನಂತೆ ಹಾರಿಹೋಗಿ, ನೂರುಬ್ಬಾರಿ ಮೂಸಿನೋಡಿ ಮುದ್ದಿಡುತ್ತ ನಿಂತು ಕೊಂಡಳು. ಚಂದನೂ ತಾನು ತಪ್ಪಿಸಿಕೊಂಡಿದ್ದಕ್ಕಾಗಿ ಕಣ್ಣಿನ ಭಾಷೆ ಯಲ್ಲಿಯೇ ಕ್ಷಮೆ ಬೇಡಿದ. ಅಮ್ಮನನ್ನು ತನಗೆ ತಿಳಿದ ರೀತಿಯಲ್ಲಿ ಅಪ್ಪಿ ಕೊಂಡ. ಹಡೆದ ತಾಯಿಯು ತನ್ನ 'ಹೊಟ್ಟೆಯ ಮಾಣಿಕದ ಹರಳು' ಪುಟ್ಟಚಿಣ್ಣನು ಏನಾದರೂ ಚೇಷ್ಟೆಮಾಡಿದಾಗ ಅವನನ್ನು ಬೈದರೆ ಆ ಮಗು ಅಮ್ಮನ ಬಳಿಗೈದು 'ನಿರಿಹಿಡಿದು ನಡುವೇರಿ' ತಾಯಿಯ ಸೆರಗನ್ನು ತನ್ನ ಮುಖಕ್ಕೆ ಮುಚ್ಚಿಕೊಂಡು ಮತ್ತೆ ಅಮ್ಮನಿಗೆ ಮೊಗತೋರಿ "ಹಿಹ್ಹೀ" ಎಂದು ನಗುತ್ತ ಆ ನಗುವಿನಲ್ಲಿಯೇ ಕ್ಷಮಾಯಾಚನೆ ಮಾಡುವಂತೆ ಚಂದನೂ ತನ್ನ ತಾಯಿಯ ಮುಂದೆ ತನ್ನ ಆಟವನ್ನೆಲ್ಲಾ ಮೆರೆದ. "ಹಸುಗಳಿಗೆ ಬಲುಬುದ್ಧಿ! ಅಡವಿಯಲ್ಲಿ ನಾವು ದಾರಿದಪ್ಪಿದಾಗ ದನಗಳನ್ನು ಮುಂದೆ ಬಿಟ್ಟರೆ ಸರಿ, ಸುಲಭವಾಗಿ ಊರು ಸೇರಬಹುದು; ಅವರಲ್ಲಿ ತಾಯಿಮಕ್ಕಳ ಪ್ರೀತಿಯ ಹೆಚ್ಚಳವನ್ನು ನೋಡಿದರೆ ನಮಗೇ ನಾಚಿಕೆಯಾಗುತ್ತದೆ" ಎಂದು ನಮ್ಮಜ್ಜ ಹೇಳಿದ್ದರು. ಆ ಮಾತು ನನಗೆ ಅಂದು ಮನವರಿಕೆಯಾಯಿತು.

* * * *

ದಿಪಾವಳಿಯೆಂದರೆ ನಮಗೆಲ್ಲಾ ಬಲು ಖುಷಿ. ಏಕೆಂದರೆ ಆ ಹಬ್ಬದಲ್ಲಿ ದನಕರುಗಳಿಗೆಲ್ಲಾ ಎಂದೂ ಇಲ್ಲದ ಉಪಚಾರ, ನಮಗೆಲ್ಲಾ 'ದವಲತ್ತು'. ಅಂದು ನಮ್ಮ ದನಕರುಗಳು, ನಮ್ಮ ಪೂಜೆಪುರಸ್ಕಾರಗಳನ್ನು ಸ್ವೀಕರಿಸಿ, ಹೂವು ಹೊಂಬಣ್ಣಗಳಿಂದ ಅಲಂಕೃತವಾಗಿ ಊರ ಅಗಸೆ ಬಾಗಿಲಲ್ಲಿ ಹಾಯ್ದು ಹಸಿರು ಮೇಯುವುದಕ್ಕೆ ಹೊರಡುತ್ತವೆ. ಹೊರಡುತ್ತವೆ ಎನ್ನುವುದಕ್ಕಿಂತ ಓಡುತ್ತವೆ ಎನ್ನುವುದೇ ಮೇಲು. ಅಗಸೆ ಬಾಗಿಲಲ್ಲಿ ಚದುರಂಗುಲಕ್ಕೊಬ್ಬರಂತೆ ನಿಂತಿರುವ ಜನರ ಕೈಯಿಂದ ಪಾರಾಗಿ ಹೋಗಬೇಕು. ಆ ಜನ ಇವುಗಳ ಕೊರಳಿಗೋ ಕೊಂಬಿಗೋ ಕಟ್ಟಿರುವ ಕೊಬ್ಬರಿಗಿಟುಕು, ಬೆಳ್ಳಿಬಳೆ, ರೂಪಾಯಿ

ಗಳನ್ನು, ಅಲಂಕರಿಸಿರುವ ಹೂಮಾಲೆಗಳನ್ನು ಕಿತ್ತುಕೊಳ್ಳಲೆಂದೇ ಕಿಕ್ಕಿರಿದು ನಿಂತಿರುತ್ತಾರೆ. ಬಂಗಾರಿಯೂ ಸಿಂಗಾರವಾಗಿ ಹೋಗುತ್ತಿದ್ದಳು. ಒಂದು ಹೂ ಮಾಲೆಯಾಗಲಿ, ಬಳೆಯಾಗಲಿ ಕಳೆದುಹೋಗುತ್ತಿರಲಿಲ್ಲ. ಜನಸಂದಣಿಯನ್ನು ನೋಡಿದವಳೇ ಮೈಮರೆತು ಓಡುವಳು, ಜನದೊಳಗೆ ನುಗ್ಗಿ ಒಂದು ನಿಮಿಷ ದಲ್ಲಿ ಮಿಂಚಿ ಮಾಯವಾಗುವಳು. ಆ ಜನದ ಕಡಲನ್ನು ಈಸಿಕೊಂಡು ಹೋಗುತ್ತಿರುವಂತೆ ಕಾಣುವಳು. ತಾನು ಧರಿಸಿದ್ದ ಹೊಂಗೆಜ್ಜೆಯ ಸರಕ್ಕೆ ಯಾರಕಯ್ಯೂ ಸೋಂಕಿಯೂ ಸಹ ಇರುತ್ತಿರಲಿಲ್ಲ. ಅವಳು ಇಷ್ಟೊಂದು ರಭಸದಿಂದ ಓಡುತ್ತಿದ್ದುದಕ್ಕೆ ಇನ್ನೂ ಒಂದು ಕಾರಣವಿದೆ: ಚಂದಣ್ಣನನ್ನು ಬಂಗಾರಿಯ ಕಣ್ಣು ತಪ್ಪಿಸಿ ಕರದುಕೊಂಡು ಹೋಗಿ ಅಗಸೆಯ ಹೊರಗಡೆ ಆಕೆಯ ಕಣ್ಣಿಗೆ ಬೀಳುವಂತೆ ನಿಲ್ಲಿಸುತ್ತಿದ್ದೆವು.

ಇಂಥದೇ ಇನ್ನೊಂದು ಹಬ್ಬ. ಮನೆಯಲ್ಲಿರುವ ಹಸು, ಹೋರಿ, ಕರು, ಎತ್ತು ಇವನ್ನೆಲ್ಲಾ ಶಾಸ್ತ್ರೀಯವಾಗಿ ಪೂಜಿಸುವುದು ಕಾರಿಹುಣ್ಣಿಮೆಯ ದಿನ. ಹೇಗೋ ಎಂತೋ ನಮ್ಮ ಹಳ್ಳಿಯವರು ಆ ಹುಣ್ಣಿಮೆಯನ್ನು ಮರೆತು ದೀವಳಿಗೆಯಲ್ಲಿಯೇ ದನಗಳನ್ನು ಮೆರೆಸುತ್ತಾರೆ. ಆದರೂ ಶಾಸ್ತ್ರ ಮಾತ್ರ ಬೆನ್ನುಬಿಟ್ಟಿಲ್ಲ. ಆ ದಿನವೂ ದನಕರುಗಳನ್ನು ಪೂಜಿಸುತ್ತಾರೆ. ಅಂದು ಬಂಗಾರಿ ಯನ್ನೂ ಚಂದನನ್ನೂ ನಾವು ವಾಸಿಸುವ ಮನೆಗೇ ಕರೆತಂದು ಪಾದಪೂಜೆ ಮಾಡಿ, ಬೆಂದಹುರುಳಿ ಬೆಲ್ಲ ತಿನ್ನಿಸಿ, ಅಲ್ಲಿಯೇ ಒಂದುಕಡೆ ತಾಯಿಯನ್ನೂ ಮಗ ನನ್ನೂ ಮಲಗಿಸಿದೆವು. ಹುರುಳಿಕಾಳಿಗೆ ಮನುಷ್ಯರು ದನಗಳು ಎಂಬ ಭೇದ ಭಾವನೆಯಿದೆಯೇ? ಬಂಗಾರಿಗೂ ಬಾಯಾರಿಕೆ. ನಾವು ಕೈಕಾಲುತೊಳೆದು ಕೊಳ್ಳುವುದಕ್ಕೆಂದು ಒಂದು ಚಿಕ್ಕ ಬಾನಿಯಲ್ಲಿ ಹಾಕಿಟ್ಟಿದ್ದ ನೀರಿಗೆ ಬಂದುಬಿಟ್ಟಿ ದ್ದಾಳೆ—ಆ ಕತ್ತಲೆಯಲ್ಲಿಯೇ. ದಾರಿಯಲ್ಲಿ ಮಲಗಿದ್ದ ನಾಲ್ವರನ್ನು ದಾಟಿ ನನ್ನ ಬಲಗಡೆಯಿದ್ದ ಬಾನಿಯೆಡೆಗೆ ಬಂದಿದ್ದಾಳೆ. ನೀರುಕುಡಿಯುವ ಸಪ್ಪಳ ಕೇಳಿ ನಮ್ಮ ಗಿರಿಯಕ್ಕ (ನಮ್ಮದೂರದ ಸಂಬಂಧ) 'ಏ ತಮ್ಮಾ ಏಳ್ರೋ ಮ್ಯಾಲ್ಕೆ, ಆಕಳ ಕಾಲೊಳಗೆ ಸಿಕ್ಕಿ ಸಿಪ್ಪೆಯಾದೀರಿ. ಆ ದೀಪದಪೊಟ್ಣ ಎಲ್ಲಿದೆಯೋ ಅದರ ಮನೆ ಮುರಿದುಹೋಗ' ಎನ್ನುತ್ತ ಆ ಹಸುವನ್ನು ಕುರಿತು "ನನ್ನ ಗಂಡ್ನ ಹೇಣ್ತಿಮಗಂದೇ!" ಎಂದು ಅಬ್ಬರಿಸುತ್ತ ದೀಪ ಹತ್ತಿಸಿದಳು ಬಂಗಾ ರಿಯ ಹೊಟ್ಟೆಯ ಕೆಳಗೆ ನಾನು ಮಲಗಿದ್ದೇನೆ. ಬಂಗಾರಿಯ ಮುಂಗಾಲು

ಗಳೆರಡು ನನ್ನ ಬಲಗಡೆಯ ಪಕ್ಕೆಯ ಹತ್ತಿರ; ಹಿಂಗಾಲುಗಳು ನನ್ನ ಹಾಸಿಗೆಯ ಎಡಗಡೆಯ ಅಂಚನ್ನು ಮೆಟ್ಟಿವೆ. ಗಿರಿಯಮ್ಮನ ಕೂಗು ಬೆದರಿಕೆಗಳಿಗೆ ಸೊಪ್ಪುಹಾಕದೆ ನೀರು ಹೀರುತ್ತಲೇ ಇದ್ದಾಳೆ ಬಂಗಾರಿ. ತನಗೆ ತೃಪ್ತಿಯಾಗುವ ವರೆಗೂ ನೀರು ಕುಡಿದು ತನ್ನ ಗೊತ್ತಿಗೆಹೋಗಿ ಮಲಗಿಕೊಂಡಳು. ಗಿರಿಯಮ್ಮ ದೀಪ ಹಿಡಿದುಕೊಂಡು ಬಂದು ಆಕಳಿಗೆ ಬದಲಾಗಿ ತಾನೇ ತುಳಿದು, ಬಡಿದು, ಚಿವುಟಿ ಏಳಿಸಿ "ಆಕಳೇನಾದರೂ ತುಳೀತಾ ತಮ್ಮ" ಎಂದು ಪ್ರತಿಯೊಬ್ಬರನ್ನೂ ಕೇಳುತ್ತಿದ್ದಾಳೆ. ನಮ್ಮ ರಾಮು ಸ್ವಲ್ಪ ಒರಟ "ಸದ್ಯ ನಿನ್ನ ತುಳಿತ ತಡೆದುಕೊಂಡರೆ ಸಾಕಾಗಿದೆ ಮಾರಾಗಿತ್ತೀ! ಹೋಗು ಸಾಕು ಸುಮ್ಮನೆ ಮಲಗು" ಎಂದ. ಆಕೆಗೆ ಆಗಲೂ ಸಮಾಧಾನವಾಗಲಿಲ್ಲ. "ಹಾಳು ಮುಂಡೆ ಮಗಂದೇ," ಅಂತ ಒದರುತ್ತ ಒಂದು ಒನಕೆಯನ್ನೆತ್ತಿದಳು ನನ್ನ ಬಂಗಾರಿಯನ್ನು ಶಿಕ್ಷಿಸಲು. ನಾನಾಗ "ಹಾ, ಹಾ, ಸಾಕುಮಾಡ್ರೀ ಅಮ್ಮ, ನಿಮ್ಮ ಸಿಟ್ಟಿಗೆ ತಣ್ಣೀರು ಹಾಕಿಬಿಡ್ರಿ, ಬಂಗಾರಿ ಬುದ್ದಿ ನಿನಗೆಲ್ಲಿ ಬಂದೀತು, ಹೋಗು ಸುಮ್ಮನೆ ಬಿದ್ದುಕೋ, ದೀಪ ಕಳಿಸಿ" ಎಂದು ಆಕೆಯನ್ನು ಬಯ್ದು ಒಳಗೆ ಕಳಿಸಿ ಮಲಗಿಕೊಂಡೆ.

ಸುಮಾರು ಎರಡು ವರ್ಷಗಳ ಹಿಂದಿನ ಮಾತು: ಶ್ರಾವಣ ಮಾಸದಲ್ಲಿ ನಡೆದದ್ದು. ಆ ಮಾಸದಲ್ಲಿ ನಾಡೆಲ್ಲಾ ಹಸಿರು, ಬುವಿಯೆಲ್ಲಾ ಹಸಿರು. ಮಳೆರಾಯನ ಒಂದು ಕಾಲು ಆಗಲೇ ಹೊರಗಿರುತ್ತದೆ, ಆದುದರಿಂದ ಅವನ ಕಾಟ ಅಷ್ಟಿರುವುದಿಲ್ಲ. ಆಗಾಗ ಸುಳಿದಾಡುವ ತಂಗಾಳಿ, ಎಳೆ ಜೋಳದ ತೊದಲು ನುಡಿ, ತಿರುಗಿದತ್ತ ಹಚ್ಚ ಹಸಿರು—ಕಣ್ಣು ಮೈ ಮನಗಳಿಗೆ ಆಹ್ಲಾದಕರವಾಗಿರುವುದು. "ಬಂದಿತು ಶ್ರಾವಣ ಹೃದಯ ವಿದ್ರಾವಣ ಕಾನನ ಕಾವಣವಾಗುತಿರೆ" ಎಂಬ ಹಾಡಿನ ಸಂಪೂರ್ಣ ಅರ್ಥ ಅರಿವಾಗುತ್ತದೆ. ಶಂಕರನ ಪ್ರಸನ್ನತೆಯೇ ಪ್ರಕೃತಿಯರೂಪು ತಳೆದಂತೆ ಅನುಭವವಾಗುವುದು. ಇವೆಲ್ಲಾ ಈಗ ಬೇರೆಯವರಿಗೆ ಆಗುವ ಅನುಭವದ ಮಾತಾಯಿತು. ನನಗೆ ಮಾತ್ರ ಆ ತಿಂಗಳು ಬಂದೊಡನೆ ಕಣ್ಣಿದ್ದೂ ಕುರುಡು; ಕಿವಿಯಿದ್ದೂ ಕಿವುಡು. ನಾನು ಈಗ ಹೇಳಲಿರುವ ಅತ್ಯಂತ ವಿಷಾದಮಯ ಘಟನೆ ನಡೆದದ್ದು ಆ ಮಾಸದಲ್ಲಿಯೇ.

ಕಾವಲಿನಲ್ಲಿ ನಮ್ಮ ಹಸುಗಳು ಮಾತ್ರ ಮೇಯುತ್ತಿದ್ದವು. ನಮ್ಮ ಬೇಣವೇನೂ ಬಟ್ಟಂಬಯಲಿನಲ್ಲಿಲ್ಲ, ನಿಬಿಡ ಕಾನನದ ತುದಿ ಸೆರಗಿನಲ್ಲಿದೆ ಅಷ್ಟೆ.

ಒಂದು ದಿನ ಕರು ಚಂದನು ಕೋಮಲವಾಗಿ ಬೆಳೆದಿದ್ದ ಹಸಿರು ಹುಲ್ಲಿನ ಎಳೆ ಚಿಗುರನ್ನು ಮೆದ್ದು ಆನಂದದಿಂದ ನಲಿದಾಡುತ್ತ ಕುಣಿಯುತ್ತ ನಲಿಯುತ್ತ ನೆಗೆದಾಡುತ್ತ ಹುಲ್ಲುಗಾವಲ ಮೇರೆಯನ್ನು ದಾಟಿ ಬಹುದೂರ ಹೋಗಿದ್ದ. ನಾನು, ನಾನೊಬ್ಬ ಪಾಪಿ—ಬಂಗಾರಿಯ ಮೈದಡಹುತ್ತ ಅಂದೇ ಎಂದಿಲ್ಲದ ಉಪಚಾರ ಮಾಡುತ್ತಿದ್ದೆ ಆಕೆಗೆ. ಪ್ರೀತಿಯ ಮುದ್ದುಗುವರ ಚಂದನನ್ನೂ ಮರೆಸುವಷ್ಟು ಮಿತಿಮೀರಿತ್ತು ನನ್ನ 'ಉಪಚಾರ.'

ಹೀಗೆಯೇ ಎಷ್ಟೋ ಹೊತ್ತಾದ ಮೇಲೆ ಕಂದನ ನೆನಪಾಯಿತು. ಬದಿಗೆ ಕಣ್ಣು ಹೊರಳಿಸಿದೆ, ಚಂದನಿರಲಿಲ್ಲ. ಹಿಂದಿನ ಅನುಭವ ನೆನಪಿಗೆ ಬಂದು ಬೆಪ್ಪು ಹೊಡೆದು ನಿಂತೆ. ಆ ಕೂಡಲೆ ಬಂಗಾರಿ ನನ್ನ ಇಂಗಿತವನ್ನರಿತಳು. ನಾಗಾಲೋಟದಲ್ಲಿ ಓಡಿದಳು. ಕಂದನನ್ನು ಬೆನ್ನಟ್ಟಿ ಹೊರಟಳು, ಗುಂಗೆಯ ಹುಳುವಿನಂತೆ ಓಡುತ್ತಿದ್ದಾಳೆ! ಅಂತರದಲ್ಲೇ ಈಸಿ ಹೋಗುತ್ತಿರುವಂತೆ ಕಾಣುತ್ತಿದೆ. ತನ್ನ ಗೆಳತಿಯರ ಅರಿವಿಲ್ಲ, ನನ್ನ ಅರಿವಿಲ್ಲ, ತನ್ನನ್ನೂ ಪೂರ್ತಿ ಮರೆತಿರುವಂತೆ ಕಾಣುತ್ತಿದೆ. ಕರು ಹೊರಟುಹೋದ ನಿಟ್ಟು ಅಂದು ಆಕೆಗೆ ಹೇಗೆ ಗೊತ್ತಾಯಿತೆಂಬುದನ್ನು ತಾಯ್ಗರುಳನ್ನೇ ಕೇಳಿ ತಿಳಿದುಕೊಳ್ಳ ಬೇಕು ಅಷ್ಟೆ.

ದೂರದಿಂದಲೇ ನೋಡಿದೆ. ಎಳಗರು ಸಂಧ್ಯಾಸೂರ್ಯನನ್ನು ಮುಟ್ಟಲು ಹೊರಟಿದೆ—ಹಕ್ಕಿಯಂತೆ ಹಾರುತ್ತ, ಚಿಗುರಿಯಂತೆ ಚಿಗಿಯುತ್ತ ಹೊರಟಿದೆ. ಕಿಲಕಿಲನೆ ನಗುತ್ತಿದ್ದ ಶಾಲಿವನವನ್ನು ದಾಟಿತು. ಅರಳಿದ ವನಸುಮಗಳ ಸವಿ ಮುತ್ತುಗಳನ್ನು ಅನುಭವಿಸುತ್ತ ಚಿಗುರು ಗಿಡಬಳ್ಳಿಗಳನ್ನು ಅಣೆಯುತ್ತ ಓಡಿಯೇ ಓಡುತ್ತಿದೆ, ಇಳಿಹೊತ್ತ ಸಂಧಿಸಲು. ಎಳಗರುವಿನ ಓಟವೂ ತಾಯ ಉದ್ವೇಗವೂ ನೂರುಮಡಿಯಾಯ್ತು. ಬಿದಿರುವನ ಹಿಂದಾಯ್ತು. ಘೋರಕಾನನ ಗರ್ಭ!

ಬಂಗಾರಿ! ಕಂದಮ್ಮ ಚಂದಣ್ಣ ನುಗ್ಗಿದನು ಜವರಾಯನಾಲಯಕೆ; ನೆಲ ಮುಗಿಲುಗಳನ್ನೆ ಪವಣಿಸಿರುವ ನಿಬಿಡ ತರುರಾಜಿಯಿಂದ ತುಂಬಿರುವ ಘನ ಘೋರಕಾಂತಾರಗರ್ಭ! ಕತ್ತಲೆಯು ದಿನಕರನ ದಾಳಿಯನ್ನು ತಡೆಯ ಲಾರದೆ ಹೆದರಿ ಓಡಿಬಂದು ಭೂದೇವಿಯ ಮರೆಹೊಕ್ಕಿದ್ದಾಳೆ, ಭೂದೇವಿ ತನ್ನ

ಮುಸುಕಿನಲ್ಲಿ ಮುಚ್ಚಿಟ್ಟು ಸಲಹುತ್ತಿದಾಳೆ. ಅಂಧಕಾಸುರನ ಗವಿಯೆ ಅದು! ಆ ಕಗ್ಗವಿಯೆ ಹೆಬ್ಬುಲಿಯ ನೆಲೆಮನೆ!

ಮಿಂಚಿನಂತೆ ಹರಿಯುತ್ತಿದ್ದ ಚಂದಣ್ಣ ನಿಂತ ಗಕ್ಕನೆ. ಕಿವಿ ನಿಮಿರಿದುವು—ಕಣ್ಣೆವೆಗಳು ತಮ್ಮ ಕೆಲಸವನ್ನೆ ಮರೆತುವು. ಬೆರಗು ಬೆದರಿಕೆಗಳನ್ನೆ ಕರಗಿಸಿ ಎರಕಹೊಯ್ದ ಗೊಂಬೆಯಂತೆ ನಿಂತಿದೆ. ಕರು ಎನ್ನುವುದಕ್ಕಿಂತ ಹೀಗೆನ್ನುವುದೇ ಮೇಲು: ಕಾರ್ಗತ್ತಲೆಯ ಹೊಳೆಯಲ್ಲಿ ಈಸಾಡಿ ಈಸಾಡಿ ದಣ್ಣನೆ ದಣಿದು, ಆ ಹುಚ್ಚುಹೊನಲ ಮಧ್ಯದಲ್ಲಿ ನೆರೆತೆರೆಗಳ ಹೊಡೆತಕ್ಕೆ ಸಿಕ್ಕಿ ಕರುಗುತ್ತಲೇ ಇರುವ ಏಕಮಾತ್ರ ಕಿರುಗಡ್ಡೆ—ಎರೆಯ ಮಣ್ಣಿನ ಕಿರುಗಡ್ಡೆಯೊಂದರ ಮೇಲೆ ಅಲುಗದೆ ಕದಲದೆ ಕುಳಿತಿರುವ ಮಿಂಚುಹುಳು!

ಬಂಗಾರಿ ಬಳಿಗೆ ಬಂದು ನೋಡುತ್ತಾಳೆ: ಕಣ್ಣನ್ನಿರಿಯುವ ಭಯಂಕರ ದೃಶ್ಯ! ಹುಲಿರಾಯ ಕಂದ ಚಂದನ ಮೇಳಿಗೆಯನ್ನು ಇನ್ನೇನು ಹಿಂಡಬೇಕು ಇನ್ನೇನು ಹಿಂಡಿದನು! ಇಲ್ಲ, ಇಲ್ಲ, ಬಂಗಾರಿಯ ಮೊನೆಗೊಂಬು ಹೆಬ್ಬುಲಿಯ ಗಂಟಲಿಗೆ ಗಾಣವಾಯಿತು. ಕದನ ಮುಸಗಿತು.

ಚೆಂದಣ್ಣ ಮೊದಲಿನಂತೆಯೇ ಕದಲದೆ ನಿಂತಿದ್ದಾನೆ. ಹೊಂಗದಿರ ಸೂರ್ಯನೂ ಅಲುಗದೆ ನಿಂತಿದ್ದಾನೆ—ಹೆಮ್ಮರಗಳ ಮರೆಯಲ್ಲಿ ನಿಂತುಕೊಂಡು ಮಿಳ್ಮಿಳನೆ ಇಣುಕಿ ನೋಡುತ್ತಿದಾನೆ. ತಿಳಿನೀಲದಾಗಸವೂ ಇಣಿಕಿಣಿಕಿ ನೋಡುತ್ತದೆ ಬೆಪ್ಪಾಗಿ. ಭೂಮಿತಾಯಿ ಮೂಕಿ, ವಿಸ್ಮಿತೆ. ಹಕ್ಕಿಪಕ್ಷಿಗಳೆಲ್ಲ ಗರಿ ಮುದುರಿಕೊಂಡು ಮರಗಳ ತುದಿಗಳಲ್ಲಿ ಕುಳಿತು ಕಣ್ಣಲ್ಲಿ ಕಣ್ಣಿಟ್ಟು ಈಕ್ಷಿಸುತ್ತಿವೆ ಈ ಕಾಳಗವನ್ನು.

ಈ ದ್ವಂದ್ವಯುದ್ಧ ಎಷ್ಟುಹೊತ್ತು ನಡೆಯಿತೋ ಹೇಳುವವರಾರು? ಆಗಗಳಿಗೆ ಎಣಿಸುವುದಕ್ಕೆ ನಮಗೆ ಸಮಯವೆಲ್ಲಿ? ಹುಲಿಯ ಕಂಡರೆ 'ಹೊ' ಮಾಡು; ಕರಡಿ ಕಂಡರೆ ಕಾಲ್ಬಿಡು ಎಂಬೊಂದು ಅನುಭವವಾಣಿಯೂ ಉಂಟು. ಅದು ನಿಜವೂ ಹೌದು. ನಾಲ್ಕಾರುಜನ ಸೇರಿ ಕೇಕೆಹಾಕಿದರೆ ಸಾಕು, ಹುಲಿಗಳು ಹೆದರಿಬಿಟ್ಟು ಬೇಟೆಯನ್ನು ಅಲ್ಲಿಯೇ ಬಿಟ್ಟು ಪಲಾಯನ ಮಾಡುತ್ತವೆ. ಆದರೆ ಈಗ ಬಂಗಾರಿ 'ಬೇಟೆ' ಯಲ್ಲ, ವೈರಿ. ಆಕೆಯ ದೆಸೆಯಿಂದ ಅನೇಕ ಹುಲಿಗಳಿಗೆ ಅರೆಹೊಟ್ಟೆಯೂ ಆಗಿತ್ತು. ನಾವು ಎಷ್ಟು ಕೇಕೆ ಹಾಕಿದರೂ ಹುಲಿಯು

ಕದಲದು, ಕದನ ನಡೆಯುತ್ತಲೇ ಇದೆ. ನನ್ನ ದನಿ ಕೇಳಿದರೆ ಸಾಕು, ನನ್ನೆಡೆಗೆ ಓಡಿಬರುತ್ತಿದ್ದ ಬಂಗಾರಿಗೆ ಅಂದು ಮಾತ್ರ ನನ್ನ ಕೂಗು ಕೇಳಿಸಲೇ ಇಲ್ಲ!

ಹೆಬ್ಬುಲಿಯನ್ನು ಬಂಗಾರಿ ತನ್ನ ಚೂಪುಗೊಂಬಿನಿಂದ ಇರಿಯುತ್ತಲೇ ಇದಾಳೆ. ಹುಲಿರಾಯನೂ ಘರ್ಜಿಸುತ್ತ ಬೋರಾಡುತ್ತ ಆಕಳ ಮೈಯನ್ನೆಲ್ಲಾ ಪರಚುತ್ತಿದ್ದಾನೆ. ಬಂಗಾರಿಯ ಮಯ್ಯೆಲ್ಲಾ ರಕ್ತಮಯವಾಯಿತು; ಜಾಜಿನಲ್ಲಿ ಮಿಂದಂತಿತ್ತು, ಆ ಬಿಳಿಯಾವು ಬಂಗಾರಿ—ತಾಯಿ. ಹೆಚ್ಚೇನು ಹಸುವೇ ಹುಲಿಯಾಗಿದೆ, ಹುಲಿಯೆ ಹಸುವಾಗಿದೆ. ಆ ವ್ಯಾಘ್ರ ಹಸುವಿನ ರಕ್ತಹೀರುವುದಿರಲಿ ಆಕೆಯ ಕಯ್ಯಿಂದ ಬದುಕಿ ಪಾರಾಗಿ ಹೋದರೆ ಸಾಕಪ್ಪಾ ಎನ್ನುವಂತೆ ಕಾಣುವುದು, ಕೂರಂಬು ಕೊಂಬುಗಳ ಪೆಟ್ಟುತಿಂದು. ಅದು ನುಣಿಚಿಕೊಂಡು ಹೋಗುವುದಕ್ಕೆ ಹವಣಿಸುತ್ತಿರುವಲ್ಲಿ ಗೋಮಾತೆ ಬಂಗಾರಿಯ ದೃಷ್ಟಿ ಎವೆ ಮುಚ್ಚಿ ತೆರೆಯುವಷ್ಟು ಹೊತ್ತು ಮಾತ್ರ ಚಂದಣ್ಣನಿದ್ದೆಡೆಗೆ ಹೊರಳಿತು. ಅದೇ ವಿಪಗಳಿಗೆಯಲ್ಲಿಯೇ ಹುಲಿರಾಯ ರಯ್ಯನೆ ಜಿಗಿದು ಬಂಗಾರಿಯ ಮೇಳಿಗೆಗೆ ಬಾಯಿಕ್ಕಿ ಒಡಮುರಿದು ಹಿಂಡಿದನು! ಈ ಕಡೆಯಿಂದ ಆಕಡೆಗೆ ಜಿಗಿದ. ಒಂದೆ ಉಸಿರಿಗೆ ಹಿಂಡಿದನು ತನ್ನಳಲು ತೀರ್ವನ್ನ—ಆ ಪಾಪಿ, ಕ್ರೂರ ವ್ಯಾಘ್ರ.

ನನ್ನ ಬಂಗಾರಿ ನೆಲಕ್ಕೆ ಬಿದ್ದಿತು, ಹುಲಿಯೂ ಉರುಳಿಬಿತ್ತು. ಹುಲಿಯೂ ಹಸುವೂ ಒಂದರ ಮಗ್ಗುಲಲ್ಲೊಂದು ಮೃತ್ಯುದೇವಿಯ ಮಕ್ಕಳಾಗಿ ಮಲಗಿದುವು. ಬೆಪ್ಪಾಗಿ ನಿಂತಿದ್ದ ಭಾಸ್ಕರನು ಮರೆಯಾದ. ಹಕ್ಕಿಗಳ ಬಳಗ ಕಣ್ಣೀರಿನ ತಿಲಾಂಜಲಿಯನ್ನರ್ಪಿಸಿತು.

ಏನೂ ಅರಿಯದ ಎಳೆಗುವರ ಚಂದಣ್ಣ ತಾಯಿಯ ಬಳಿಗೆ ಹೋಗಿ ಮಲಗಿದ ತಾಯ ಮೈ ನೆಕ್ಕುತ್ತ—ಎಷ್ಟು ಪ್ರಯತ್ನ ಮಾಡಿದರೂ ಅಮ್ಮನನ್ನು ಅಗಲಿ ಬರಲೊಲ್ಲ! ನನ್ನ ಬಂಗಾರಿಯ ಶವವನ್ನು ಹೊತ್ತು ತಂದು ನಮ್ಮ ಕೊಪ್ಪಲಲ್ಲಿಯೇ ಅವಳ ಸಮಾಧಿ ಮಾಡಿದೆವು. ಆಕೆ ಹುಲಿರಾಯನೊಂದಿಗೆ ಕಾದಾಡಿದ ಸ್ಥಳಕ್ಕೆ ಬಂಗಾರಿಬೇಣ ಎಂದು ಹೆಸರಿಟ್ಟೆವು. ಅಲ್ಲೆಲ್ಲಾ ಬಯಲು ಮಾಡಿಬಿಟ್ಟೆವು.

ಅಂದಿನಿಂದ ನಾನು ತುರುಗಾಹಿ ಕೆಲಸವನ್ನು ಬಿಟ್ಟುಬಿಟ್ಟೆ. ಬಂಗಾರಿಯಿಲ್ಲದ ತುರುಮಂದೆಯೊಂದು ತುರುಮಂದೆಯೇ? ಅದಕ್ಕೆ ನಾನು ಕಾವಲುಗಾರನಾಗುವುದೇ? ಊಹೂಂ-ಅದೆಲ್ಲಾ ಆಗದಮಾತು. ಚಂದಣ್ಣನನ್ನು ಬಂಗಾರಿ

ನನ್ನ ಮಡಲಿಗೆ ಹಾಕಿ ಹೋಗಿದ್ದಾಳೆ. ಅವನ ಪಾಲಿಗೆ ನಾನೇ ಸರ್ವಸ್ವ. ನಾನೇ ಬಂಗಾರಿ, ನಾನೇ ಅಚ್ಚುಮೆಚ್ಚಿನ ಗೆಳೆಯ. ಆದರೂ ನಮ್ಮ ಕಾವಲಕಡೆ ಹೋದಾಗ ಚಂದಣ್ಣ ಆ ಕಾದಾಡಿದ ಸ್ಥಳಕ್ಕೆ ಹೋಗಿ ತನ್ನಮ್ಮ ಮಲಗಿದ್ದೆಡೆಯನ್ನು ಮೂಸಿನೋಡುತ್ತಿರುತ್ತಾನೆ. ಅವನನ್ನೂ ನನ್ನಿಂದ ಎಲ್ಲಿ ಕಸಿದುಕೊಳ್ಳುವುದೋ ಕರುಳಿಲ್ಲದ ಕಂಗುರುಡ ಮೂಳ ದುರ್ವಿಧಿ!

*     *     *     *

ಇಂಥಾ ಚಂದನನ್ನು ಮನೆಬಿಟ್ಟು ಹೊರಡಿಸುವುದೆ? ಬಂಗಾರಿ ಏನೆಂದುಕೊಂಡಾಳು? ಚಂದನಿಗೆ ಬೆಲೆ ಕಟ್ಟುವುದೇ? ಅದೊಂದು ಹುಚ್ಚುತನ. ಬೆಲೆ ಕಟ್ಟಿದ ಹಾಗೆ ಮಾಡಿ ಚಂದನನ್ನೊಯ್ದವರು ಕಟುಕರಾದರೆ? ಅದು ಮೇವು ನೀರು ಸಿಗದ ಊರಾದರೆ? ಒಣಹುಲ್ಲಿಗೂ ಗತಿಯಿಲ್ಲದವನ ಮನೆಯಾದರೆ?............ಊಹುಂ, ಖಂಡಿತ ಮಾರುವುದಿಲ್ಲ. ಸಾಲಮಾಡಿಯೇ ಗಿಡ್ಡಗಳನ್ನು ಕೊಂಡರಾಯಿತು.

# ಜೋಳ ಗುಮ್ಮಟ

" ಹೊಂ, ಈ ಕಾಗದದ ವಾಯಿದೆ ಇನ್ನೊಂದೇ ತಿಂಗಳು, ಆ ಋಣಪಾತಕ ಇನ್ನೂ ಬಡ್ಡಿ ಕೊಡಲಿಲ್ಲ. ಕೋರ್ಟು ಬಾಗಿಲು ಹತ್ತಬೇಕೋ ಏನೋ...... ಇವನೊಬ್ಬ ! ಛತ್ರಪತಿ ಮೊಮ್ಮಗ, ಮಾತಿನೊಳಗೇ ಮನೆ ಕಟ್ಟಿಬಿಡ್ತಾನೆ. ಕೊಟ್ಟಸಾಲ ತೀರಿಸೋದಿರಲಿ, ಬಡ್ಡಿ ಕೊಡೋದಕ್ಕೂ ಶಕ್ತಿಯಿಲ್ಲ, ಈಸಾರೀನೂ ಖಾಲಿ ಷರಾಬರೀತಾನೋ........ಸರಿ ಈ ಪಾಳೇಗಾರ ಒಬ್ಬ ! ಇವರ ಮುತ್ತಜ್ಜನ ಮುತ್ತಜ್ಜ ಪಾಳೇಗಾರನಾಗಿದ್ದರೆ ನನಗೇನು ? ಇವನಿಗೆ ತಿನ್ನೋದಕ್ಕೆ ಅನ್ನಕ್ಕೇ ಗತಿಯಿಲ್ಲ ! ಬಿರುದು ಬಾವಲಿ ಬೇಕು, ನವರಾತ್ರಿಹಬ್ಬದೊಳಗೆ ಪಲ್ಲಕ್ಕಿ ಮೇಲೆ ಕೂತು ಮೆರೀಬೇಕು. ಏನು ಪಾಳೇಗಾರಿಕೆಯೋ ! ಮತ್ತೆ ಸಾಲ ಕೊಡೋದಿಲ್ಲಾಂದ್ರೆ ಕೊಟ್ಟಸಾಲ ಕೊಡಬ್ಯಾಡ್ರಿ ಅಂತ ಜನಕ್ಕೆಲ್ಲಾ ಹೇಳದನೆ ! "

" ಲೇ, ಲೇ, "

ಒಳಗಿನಿಂದ ಒಂದು ಹೆಣ್ಣುದನಿ " ಏನು ? "

" ಆ ರಾಮುಕೋಟಿಗೆ ಎಷ್ಟು ಮಾನ ಜೋಳ ಕೊಟ್ಟೆ ? ರೂಪಾಯಿಗೆ ಒಂದುಸೇರು ಒಂದೂವರೆಪಾವು ಅಂತ ಹೇಳಿದೆಯೋ ಇಲ್ಲವೋ ? "

ಮತ್ತೂ ಒಳಗಿನಿಂದಲೇ " ದಾರಣೇ ಹೇಳೇ ಕೊಟ್ಟಿರೋದು. ಐದು ರೂಪಾಯಿಗೆ ಕೊಟ್ಟೆ. ರೂಪಾಯನ್ನೂ ಕೊಟ್ಟುಹೋದ " ಎಂದಿತಾವ್ಯಕ್ತಿ.

" ಯಾವ ಸೇರಿನಾಗೆ ಅಳೆದೆ ? ಕೊಡೋದರೊಳಗೋ ? ಹೆಂಗೆ ? "

" ಅಯ್ಯೋ, ತಗೊಳ್ಳೋ ಸೇರು ಕೆಳಗೆಲ್ಲೈತೆ, ಅಟ್ಟದ ಮ್ಯಾಲಿಟ್ಟೆ " ಒಳಗಿನಿಂದ ಉತ್ತರ ಬಂತು.

ಸಾವುಕಾರ ಅನ್ನದಾನಪ್ಪನವರ ತನಿಖೆ ಇದು. ಅವರ ಮನೆಯ ಮುಂಭಾಗದ ಜಗುಲಿಯ ಮೇಲೆ ಗಾರೆಯ ದಿಂಬೊಂದಕ್ಕೆ ಒರಗಿ ಕುಳಿತಿದ್ದಾರೆ—ಹರಕು ಈಚಲ ಚಾಪೆಯ ಗದ್ದುಗೆಯ ಮೇಲೆ. ಎದುರಿಗೊಂದು ಇಳಿಜಾರು ಕಾಲು ಮಣೆ, ಅದರ ಮೇಲೆ ಜಮಾಖರ್ಚಿನ ಕಡತಗಳು. ಒಂದು ಖಾತೆ ಪುಸ್ತಕವನ್ನು ತೆಗೆದು ಮೇಜಿನ ಮೇಲೆ ಅಗಲಿಸಿಟ್ಟು ಚಾಳೀಸ—ತಂತಿಯ ಬದಲು ತಂತುವನ್ನು ಕಟ್ಟಿಕೊಂಡಿದ್ದ ಚಾಳೀಸವನ್ನು ಮೂಗಿನ ಮೇಲಿಟ್ಟುಕೊಂಡು

ದಾರವನ್ನು ಕಿವಿಗೆ ಸುತ್ತಿದ್ದಾರೆ. ಮೋಲ್ಕ್ಯಂಡಂತೆ ಕೆಲವುವೇಳೆ ಸ್ವಗತ ಭಾಷಣ ಕೆಲವುವೇಳೆ ಮಡದಿಯೊಂದಿಗೆ ಸಂಭಾಷಣೆ ನಡೆಯುತ್ತಿದೆ.

ಅದೇ ಸಮಯದಲ್ಲಿ ಮಾದಿಗರ ಚಿಕ್ಕರಂಗ ಇಳಿದ. ಅವನೂ ಮನುಷ್ಯನೇ. ವಯಸ್ಸೇನೂ ಅಷ್ಟಾಗಿಲ್ಲವೆಂದು ಊಹಿಸಬಹುದು; ನಲವತ್ತರ ಮೇಲೆ ಐದು ಇದ್ದೀತು. ಆದರೆ ಆ ಮುಖ, ಆ ನಡಗೆ ನೋಡಿದರೆ ಹೆಗಲು ತೊಳಿದ ಎತ್ತು ಅಥವಾ ಸರಕಾರಿ ಚಾಕರಿಯಿಂದ ನಿವೃತ್ತನಾಗಿ ಹತ್ತು ವರ್ಷದ ಜೀವನಾಂಶವನ್ನು ಆಗಲೇ ಪಡೆದಿರುವವನಂತೆ, ಎದೆಹೋದ ಜೂಜಿನ ಕುದುರೆಯಂತೆ ಇದ್ದಾನೆ. ಸೊಂಟಕ್ಕೆ ಸುತ್ತಿಕೊಂಡಿದ್ದ ಪಂಚೆ ಚಡ್ಡಿಯರೂಪು ತಳೆದು ಪರಕಾಯಪ್ರವೇಶ ಮಾಡಿದೆ. ಅಂಗಿಯೆಂಬುದೊಂದು ಹಿಂಜಿ ಹಿಸಿದು ಹರಿದು ಹೋದ ಅರಿವೆ—ಬಳ್ಳಿಯಂತೆ ಮೈಗೆಲ್ಲಾ ಹಬ್ಬಿ ಹರಡಿದೆ. ಬಿಸಿಲು, ಚಳಿ, ಮಳೆಗನ್ನು ಎದುರಿಸಿ ಆ ಮೈಚರ್ಮ ಕಪ್ಪಗೆ ಮಿಂಚುತ್ತಿದೆ, ಅದಕ್ಕೆ ಕೆಲವೆಡೆ ಬಿಳಿಬೂದಿ ಬಡಿದುಕೊಂಡಿದೆ. ಆ ಚರ್ಮವನ್ನೂ ಪಂಚಿಸಿ ಎಲುಬುಗಳು ಎದ್ದು ಕಾಣುತ್ತಿವೆ. ಮಳೆಯಿಲ್ಲದಬೆಳೆ ಮುಖದ ಮೇಲೆಲ್ಲಾ ಬೆಳೆದು ತಗ್ಗು ಉಬ್ಬುಗಳನ್ನು ಮುಚ್ಚಿದೆ. ಕಣ್ಣು ನೆತ್ತಿಗೆ ನುಗ್ಗಲು ಹವಣಿಸುತ್ತಿವೆ. ತಲೆಗೆ ದೇವರು ಕೊಟ್ಟ ಕೂದಲೇ ರಕ್ಷೆಯಾಗಿದೆ.

"ಅಡ್ಡಬಿದ್ದೆ ಮಹಾಸ್ವಾಮಿ" ದೂರದಿಂದಲೇ ಸಾಷ್ಟಾಂಗ ಹಾಕಿದ. ಸಾವುಕಾರರ ಕಣ್ಣು ಆ ಕಡೆಗೆ ಹೊರಳಲೇ ಇಲ್ಲ.

"ಸ್ವಾಮಿಗೆ ಯಾಕೋ ಹೊರಗಿನ ದ್ಯಾಸೇ ಇಲ್ಲ" ಎಂದು ಅವರ ಗಮನವನ್ನು ತನ್ನತ್ತ ಸೆಳೆದ.

ಅನ್ನದಾನಪ್ಪನವರು ತಮ್ಮ ಕಡತ ನೋಡುತ್ತಲೇ ಹೇಳಿದರು "ನಿಮ್ಮಂತ ಬಡ್ಡಿಮಕ್ಕಳನ್ನು ಕಟ್ಟಿಕೊಂಡರೆ ಏನು ಆಗೋದು ಮತ್ತೆ? ಒಂದುದಿನ ಈ ಬುಕ್ಕುಗಳನ್ನೆಲ್ಲಾ ಬಾವಿಗೆ ಎಸೆದುಬಿಟ್ಟು ಕೈತೊಳಕೋಬೇಕು ಅಂತ ಮಾಡಿದೇನೆ"........ಹೀಗೆಂದವರೇ ತಲೆ ಮೇಲಕ್ಕೆತ್ತಿ ಅವನನ್ನು ಹುಳಿ ಹುಳಿ ನೋಡುತ್ತ ಎಲ್ಲಿ ನಿನ್ನ ಮಗ?........ಅವ್ನು, ಅವ್ನು, ಅವ್ನು, ಕೈಗೆ ಸಿಕ್ಕಿದ್ರೇ! ಚಿಗುದು ತೋರಣ ಕಟ್ಟಿಬಿಡ್ತಿದ್ದೆ. ಎಂತಾ ಕೆಲಸ ಕೆಡಿಸಿದ ಇವೊತ್ತು!" ರೋಷದಿಂದ ಹಲ್ಲು ಕಡಿಯುತ್ತ ಗದರಿಸಿದರು.

"ಇವೊತ್ತು ಒಂದುದಿನ ಉಳಿದಿನ ಮಾಡಿಕೋ ಸ್ವಾಮಿ ?" ಅವನು ಏನೋ ಆಶೆ ಇಟ್ಟುಕೊಂಡು ಬಂದಿದ್ದರೆ ಸಾವುಕಾರರ ಶಿಟ್ಟು ಬೇರೆ ಕಾದಿತ್ತು ವಿಧಿಯಾಗಿ.

"ಆ, ಆ, ಏನಂದೆ ? " ಅದೇ ಗದರಿಕೆ.

ಚಿಕ್ಕರಂಗ ದೈನ್ಯದಿಂದ ಕರಗಿ ನೀರಾಗಿ ಉಗುಳು ನುಂಗಿ ಗಂಟಲು ಸರಿಮಾಡಿಕೊಂಡು "ಮನೆಯಾಗೆ........ಇವೊತ್ತು ಉಣ್ಣಾಕೆ ಜ್ವಾಳ ಇದ್ದಿಲ್ಲ, ಆ ಗಾರ್ಡು........ಬಂದು ಕರಕೊಂಡು ಹೋದ ಸ್ವಾಮಿ, ಮುಂಗಡವಾಗೇ ಎಳ್ಡುಮಾನ ಜ್ವಾಳ ಕೊಟ್ಟ. ಈಗಿನ ಕಾಲದಾಗೆ ಎರಡುಮಾನ ಜೋಳ ಸಿಗ್ತಾವೆ ಅಂದರೆ ಬಿಡಾಕೆ ಮನಸು ಬಂದಿತಾ ಸ್ವಾಮಿ? ಮನೆಯಾಗೆ ಒಂದು ಕಾಳು ಜ್ವಾಳವೂ ಇದ್ದಿಲ್ಲ........ನನ್ನೊಡೆಯ, ಇವತ್ತೊಂದು ದಿನ—ಹೊಟ್ಟೆ ಒಳಗೆ ಹಾಕ್ಕೋಬೇಕು."

"ಹುಂ, ಕಳ್ಳನಾಟ ಸಾಗಿಸಬೇಕೇನೋ—ದಿನಕ್ಕೆ ಎರಡು ಮಾನದಂಗೆ ಕೂಲಿ ಕೊಟ್ಟಿದ್ದಾನು—ಬಿಟ್ಟೆ ಸಂಪಾದನೆ ಇರುವಾಗ ಕೊಡದೆ ಏನು ಮಾಡಿಯಾನು? ನೀನು ಅದಕ್ಕೆ ನಮ್ಮ ಮನೆ ಬದುಕು ಹಡ್ಡುಮಾಡಿ ಬಿಟ್ಟೆಯಲ್ಲ! ನೀವೂ–ಮಾದಿಗರೂ–ಅರಿಶಿನದ ಬಾನಕ್ಕಾಗಿ ವರುಷದ ಬಾನ ಕಳಕೊಳ್ಳೋ ಜಾತಿ. ಸಂಬಳ ಇಟ್ಟುಕೊಳ್ಳುವಾಗಲೇ ಹೇಳಿದೆ, ಹೀಗಲ್ಲಾಮಾಡ್ತೀರಿ ನಾನು ಖಂಡಿತ ಹಣ ಕೊಡೋದಿಲ್ಲಾಂತ. ನೀನು ರಾಣಾರಂಪು ಮಾಡಿದೆ—ಹೋಗಲಿ ಪಾಪ ಅಂತ ಕೊಟ್ಟೆ. ಇದೇನಾ ಉಪಕಾರ?........ಸಾಲ ಒಯ್ಯುವಾಗ ಚಕ್ಕಂದವಾಗಿತ್ತು ಅಲ್ವೇ."

"ಕೊಟ್ಟು ಹಿಡಿದಿದ್ದೀರಿ ನನ್ನೊಡೆಯ, ಇಲ್ಲಾ ಅಂತೇನಾ? ಇವೊತ್ತೊಂದಿನ ನನ್ನೊಡೆಯ" ಸಾವುಕಾರ ತನ್ನ ಮಾತನ್ನು ಮುಂದುವರಿಸಿಯೇ ಇದ್ದ.

"ನಾನು ಮೊದಲೇ ಹೇಳಿದೆ ನಿನಗೆ. ಹತ್ತುರೂಪಾಯಿ ಕೊಡುತ್ತೇನೆ. ಅಸಲು ಯಾವಾಗಲಾದರೂ ತೀರಿಸು, ಬಡ್ಡಿಗೆ ಮಾತ್ರ ವರ್ಷಾ ಒಂದು ಬಂಡಿಗೊಬ್ಬರ ಕೊಡು ಅಂತ. ನೀನು ಕೇಳಬೇಕಲ್ಲ. ಅಲ್ಲಲೇ! ನೀನು 'ಹೌದು' ಅನ್ನಂಗೆ ಸರ್ಕಾರಿ ಟಾಂಪು ಹಚ್ಚಿದ ಕಾಗದದ ಮ್ಯಾಲೆ ಬರೆದುಕೊಟ್ಟಿದ್ದೀ ನೋಡು! ಜಕ್ಕುಸ್ತು ಬಂದು ದುಡಿಯಬೇಕು–ಆಳುಮಗನಾಗಿ ತೀರಿಸಬೇಕು–

ಯಾರಿಚ್ಚಿ ?" ಸಾವ್ಕಾರರ ದನಿಯಲ್ಲಿ, ಮುಖದ ಮೇಲೆ ಹಣದ ದರ್ಪ, ಡೌಲು ನಿರ್ದಯತೆ ತಾಂಡವವಾಡುತ್ತಿದ್ದುವು.

"ಇದೊಂದೇಸಾರಿ, ಮಗನ ತಪ್ಪು ಒಳಹೊಯ್ಕೋಬೇಕು ನನ್ನೊಡೆಯ. ಹುಡುಗನೂ ಬಾಳ ಹೊಯ್ರಾಡಿದ. ನಾನೇ ಬೈದು ಜುಲುಮೆಮಾಡಿ ಕಳಿಸ್ದೆ. ಹೊಟ್ಟೆ ಕೇಳಬೇಕಲ್ಲ ನನ್ನೊಡೆಯ" ಕೈಮುಗಿದುಕೊಂಡೇ ಮಾತನಾಡಿದ

"ಇರಲಿ, ಹೋಗು ಹೋಗು ಇರಲಿ" ತಲೆ ಹಾಕುತ್ತ ಹೀಗಂದರು. ಸೇಡುತೀರಿಸಿಕೊಳ್ಳಬೇಕೆಂದೇನೊ.

"ಸ್ವಾಮಿ, ಒಂದು ಮಾತಿತ್ತು ಅದಕ್ಕೆ ಬಂದೆ, ಸ್ವಲ್ಪ ಆಲಿಸಬೇಕು" ಶಂಕರನ ಮುಂದೆ ನಂದಿಯೂ ಅಷ್ಟು ವಿಧೇಯತೆಯಿಂದ ನಮ್ರತೆಯಿಂದ ನಿಲ್ಲುತ್ತಾನೋ ಇಲ್ಲವೋ. ಆದರೆ ಆ ನಂದಿಗಿಸುವ ಪದವಿ ! ಇವನಾದರೆ ನಿಷ್ಕಾಮ ಸ್ವಾಮಿ ನಿಷ್ಠೆಯುಳ್ಳವನು. ಹೊಟ್ಟೆ ತುಂಬಿದರೆ ತೀರಿತು ಇವನಾಶೆ.

ಸಾವ್ಕಾರರಿಗೆ ಮತ್ತೆ ಪಿತ್ತ ನೆತ್ತಿಗೇರಿತು. ವ್ಯಂಗ್ಯವಾಗಿ ಹೇಳಿದರು.

"ಓಹೋ ಆ 'ಮಾತಿ' ಗಾಗಿ ಬಂದೆ ನೀನು ! ಉಳಿದಿನ (ಕರಾರು ಮುಗಿದ ಮೇಲೆಯೂ ಜೀತದಾಳು ಬದುಕಿದ್ದರೆ ಈ ಸಿ. ಎಲ್. ದಿನಗಳೂ ದುಡಿಯಬೇಕು) ಬರೆಸೋದಕ್ಕೆ ಬರಲಿಲ್ಲ ?"

"ಎರಡೂ ಆಯ್ತು ಅಂತ ಬಂದೆ........ಆ........ಸ್ವಾಮಿ, ನಾನು ಕರಾರು ಬರಕೊಟ್ಟಿರೋದು ಎಷ್ಟು ರೂಪಾಯಿಗೆ" ವಿಷಯ ಎತ್ತುವುದಕ್ಕೆ ಪೀಠಿಕೆ ಹಾಕಿದ.

"ತಗೊಂಡು ಹೋಗೋವಾಗ ಎಲ್ಲಾ ಗೊತ್ತಿರ್ತದೆ, ಆ ಮೇಲೆ ಎಲ್ಲಾ ಮರೀತದೆ. ಅರುವತ್ತು ರೂಪಾಯಿಗೆ ಬರಕೊಟ್ಟಿರೋದು, ಹದಿನೈದು ವರಾಕ್ಕೆ (ವರಹಕ್ಕೆ) ಬಡ್ಡಿಬಾಪ್ತು ವರ್ಷಾ ಮೂರು ಬಂಡಿ ಗೊಬ್ಬರ ಕೊಡಬೇಕು. ಮನೆಯಾಗೆ ಹುಡುಗನ್ನ 'ಸಂಬಳ' ಇಟ್ಕೊಂಡದ್ದಕ್ಕೆ ನಾನು, ನಾನು ! ನಿನ್ನ ಮಗಗೆ, ಅನ್ನ ಬಟ್ಟೆ ಎಲ್ಲಾನೂ ಕೊಟ್ಟು ಅದರ ಜೊತೆಗೆ ನಿನ್ನ ಸಾಲದೊಳಗೆ ವರ್ಷಾ ಹದಿನೈದು ರೂಪಾಯಿ ಮುರಿಕಟ್ಟನೂ ಮಾಡಿಕೊಡಬೇಕು. ನೋಡಿದೆಯಾ ! ನೀವೇ ಶ್ಯಾಣ್ಯಾರುಕಣೋ, ನಾವೇನು ! ಸುಮ್ನೇ ದುಡಿದೂ ದುಡಿದೂ ಹಾಳಾಗೋರು !" ಅವನ ಮನಸ್ಸಿಗೆ ನೆಮ್ಮದಿಯಾಗಲಿ,

ಅವನಿಗೆ ತಾವು ಉಪಕಾರ ಮಾಡಿದ್ದೇವೆ, ಅವನಿಂದ ತಮಗೆ ಲುಕ್ಸಾನೇ ಆಗಿದೆ ಯೆಂದು ಅರಿಯಲೆಂಬುದು ಅನ್ನದಾನಪ್ಪನವರ ಮನೀಷೆ.

"ಅದು ಆಯ್ತಲ್ಲ ಬುದ್ದಿ. ಬಡವನಿಗೆ ಒಳ್ಳೆ ಸಮಯಕ್ಕೆ ಆತುಕೊಂಡಿರಿ, ಮರ್ಯಾದೆ ಉಳಿಸಿದಿರಿ. ಇಲ್ಲದೆ ಇದ್ದರೆ! ಏನು ಹೇಳಲಿ! ದುರುಗವ್ವನ ಹಬ್ಬಕ್ಕೆ ಮನೆಗೆ ಬೀಗರು ಬಂದುಬಿಟ್ಟಿದ್ದಾರೆ, ಕಯ್ಯಾಗೆ ಒಂದು ಕುರುಡು ಕವಡೆಯೂ ಇಲ್ಲ! ಗೋಟು ಅಡಕೆಗಾಗಿ ಆನೆಯಂತಹ ಮಾನ ಕಳಕೊಳ್ಳೋ ಪಾಡು ಬಂದಿತ್ತು. ಈಗ ಇನ್ನೊಂದು, ಕುತ್ತಿಗೇಗೆ ಬಂದು ಬಿಟ್ಟತೆ. ನಾವು ಬದುಕೋದು ಸಾಯೋದು ನಿನ್ನ ಕಯ್ಯಾಗೈತೆ ನನ್ನೊಡೆಯ. ಒಂದು ಪಲ್ಲಾ ಜ್ವಾಳ........

"ಏನು ಏನು ಏನು? ಎಲ್ಲಿ, ಇನ್ನೊಂದುಸಾರಿ ಅನ್ನು .......ಲೇ ಋಣ ಪಾತಕ, ಗೋಪಾಳದ........ಮಗನೆ, ಎದ್ದು ಹೋಗ್ತೀಯೋ ಚಾಟಿ ಏಟು ಬೇಕೋ?" ಸಾವುಕಾರ ಅನ್ನದಾನಪ್ಪನವರಿಗೆ ಕೋಪ ಮಿತಿಮೀರಿ ಬಂದಿತ್ತು. ಮತ್ತೂ ರಂಗ "ನೀವು ಹೊಡೀರಿ, ಬೈರಿ ದೇವ್ರು, ಬಲಗಾಲಿಂದ ಒದ್ದರೆ ಎಡ ಗಾಲು ಹಿಡಿಕೋತೀನೆ. ಹೊಟ್ಟೆ ಕೇಳಬೇಕಲ್ಲ ನನ್ನೊಡೆಯ. ಇನ್ಯಾರ ಹತ್ತರ ಹೋಗಲಿ. ನೀನು ಕೊಟ್ಟರೇ ನಿನ್ನ ಹೆಸರು ಹೇಳಿ ಅನ್ನ ತಿಂದು ಬದುಕ್ಕೋ ತೇವೆ. ಕೊಡದಿದ್ದರೂ ನಿನ್ನ ಹೆಸರ್ಹೇಳೀ ಸಾಯ್ತೀವೆ."

ಸಾವುಕಾರರಿಗೆ ಅದೇ ಬಿಂಕ, ಅದೇ ಅಭಿಮಾನ.

"ನಾವು ಹಿಂದಿನ ಜನುಮದಾಗೆ ನಿಮ್ಮಪ್ಪನ ರಿಣ ತಿಂದಿದ್ವೇನೊ! ಹೋಗೋ ಹೋಗು."

"ಸ್ವಾಮಿ, ಇನ್ನೂ ನಾಲ್ಕುವರ್ಷ ಹುಡುಗನ್ನ ನಿಮ್ಮ ಮನೆಯಾಗೇ ಇಡ್ತೇನೆ. ಕಾಗದ ಬರಕೊಡ್ತೇನೆ ನನ್ನೊಡೆಯ. ಹಿಂಗೆ ಯಾಕೆ ಮಾಡ್ತೀ ನೀನು? ನಾನು ಎಲ್ಲಿ ಹೋಗಲಿ ಹೇಳು, ನಿನ್ನ ಮೆಟ್ಟುಗಲ್ಲುಕಾಯೋ ಗುಲಾಮ." ದೈನ್ಯ ಕಾರ್ಪಣ್ಯ ವ್ಯವೆತ್ತಂತಿದೆ. ಪಂಚಪ್ರಾಣಗಳನ್ನೂ ನಾಲಗೆಗೆ ತಂದಿ ದ್ದಾನೆ. ಕರುಣೆಯ ನುಡಿಗಳನ್ನು ಎದುರುಗೊಳ್ಳಲು ಆಗುದ್ದಗಣ್ಣುಗಳು ಮೊರಗಿವಿಗಳೂ, ಆಸೆಯಿಂದ ನೋಡುತ್ತಿವೆ.

ಸಾವುಕಾರರು ಕಣ್ಣು ಕೆಕ್ಕರಿಸಿ ಗಡಕುಹಾಕಿದರು.

"ಒದೆಬೇಕೋ ಎದ್ದು ಹೋಗ್ತೀಯೋ?"

ಆದರೆ ಅನ್ನದೇವರು ಮೈದುಂಬಿರುವವರು ಏನುಮಾಡುವುದಕ್ಕೂ ಹೇಸರು. ಧನಕನಕ ವಸ್ತುವಾಹನ ಈ ಸೌಭಾಗ್ಯಗಳೆಲ್ಲ ಇರುವ 'ದಯವುಳ್ಳವರು' ದೇವರ ದಯವುಳ್ಳವರೂ ಕುಣಿಯುತ್ತಾರೆ. ಒಡಲಿಗೆ ಉಡಿಗೆ, ಹೊಟ್ಟೆಗೆ ಕೂಳು ಇಲ್ಲದಿದ್ದವರೂ ಕುಣಿಯುತ್ತಾರೆ. ಇಬ್ಬರೂ ಕುಣಿಯುವರು. ಇಬ್ಬರನ್ನು ಕುಣಿಸುವುದೂ ಧನವೇ! ಆದರೆ ರಾಗಬೇರೆ, ತಾಳಬೇರೆ.

"ಮತ್ತೆ ಒಂದುಚೀಲ ಜ್ವಾಳ ಕೇಳುತ್ತಾನಲ್ಲ ಈ ಮಾದಿಗ. ಇವನ ಮಗ ಜೋಳದ ಹಣಕ್ಕೂ ದುಡೀತಾನಂತೆ. ಅವನು ಇನ್ನು ಎಂಟು ವರ್ಷವೂ ಬದುಕಿಯೇ ಇರುತ್ತಾನೆನ್ನುವುದಕ್ಕೆ ಗ್ಯಾರಂಟಿ ಏನು? ಜೋಳವನ್ನು ಕದ್ದು ಗಡಿದಾಟಿಸಿ ಹೆಚ್ಚು ಹೆಚ್ಚು ಲಾಭವನ್ನು ಸಂಪಾದನೆ ಮಾಡುವುದು ಬಿಟ್ಟು ಇವನಿಗೆ ಕೊಡಬೇಕಂತೆ........ಇವನ ಕಾಟ ಹೇಗೆ ತಪ್ಪಿಸಿಕೊಳ್ಳೋದು? ಹದಿನಾರು ಹರೆಯದ ಇವನ ಮಗ ನನ್ನ ಮನೆಯಲ್ಲಿ ಲೆಕ್ಕಕ್ಕಾದರೂ ಆಳು. ಲೆಕ್ಕಕ್ಕೇ! ಇನ್ನೇನು?........ಅವನಿಗೆ ಅನ್ನ ಹಾಕೋದು ನನ್ನ ಧರ್ಮ. ನೌಕರಿ ಕರಾರಿನಲ್ಲಿ ಹೀಗೆ ಬರದೂ ಇದೆ. ಅವರಪ್ಪ ಈ ಚಿಕ್ಕರಂಗನ ಸುದ್ದಿ ಕಟ್ಟಿಕೊಂಡು ನನಗೇನು? ಗುಡ್ಡಕ್ಕೆ ಹಚ್ಚಡ ಹೊದಿಸಿ 'ಹೌದು' ಅನ್ನಿಕೊಳ್ಳುವುದಕ್ಕಾದೀತೆ. ದುಡ್ಡೇ ದೊಡ್ಡಪ್ಪ—ಅಂದರೆ ದೇವರು" ಇದು ಸಾವುಕಾರರ ವಿಚಾರತರಂಗ.

ರಂಗನ ವಿಚಾರ ಈ ಮಾರ್ಗದಲ್ಲಿ ಹೇಗೆ ಹೋದೀತು? ಕೂಳೊಂದು ಗಳಿಗೆ ತಡೆದರಾ ಪಾತರದ ಮೇಳ ಮುರಿದಂತೆ" ಎಂದ ಸರ್ವಜ್ಞ. ರಂಗನ ಮನೆಯಲ್ಲಿ ನಾಳೆ ಬೆಳಗ್ಗೆ ಬೀಸುವುದಕ್ಕೆ ಒಂದು ಒಡಕು ಜೋಳದ ಕಾಳೂ ಇಲ್ಲ. ಗಾರ್ಡು ಕೊಟ್ಟ ಎರಡು ಮಾನದಲ್ಲಿ ಒಂದೂವರೆ ಮಾನ ಕಡಕ್ಕೆ ಹೋಯಿತು. ನಾಳೆಗೆ ಇನ್ನೊಬ್ಬ ಶಿವ ಮೈದೋರಬೇಕು.

"ನೀನೇಗತಿ ನನ್ನೊಡೆಯ, ನೀನೇಗತಿ ನನ್ನೊಡೆಯ" ಎನ್ನುತ್ತ ನೀರುಗಣ್ಣಿನಿಂದ ಸಾವ್ಕಾರ ಅನ್ನದಾನಪ್ಪನವರ ಕಾಲು ಕಟ್ಟಿಕೊಂಡ."

ಸಾವ್ಕಾರನಿಗೆ ಇನ್ನು ತಡೆಯುವುದಕ್ಕಾಗಲಿಲ್ಲ. ಕಣ್ಣಿಂದ ಬೆಂಕಿಕಿಡಿ ಸಿಡಿಸುತ್ತ ಸಣ್ಣರಂಗನನ್ನು ಝಾಡಿಸಿ ಒದ್ದುಬಿಟ್ಟರು. ಸಪ್ತಮ ಸ್ವರದಲ್ಲಿ ಅಬ್ಬರಿಸಿದರು.

"ಥೂ ಗತಿಗೆಟ್ಟ ಸೂ—ಮಗನೆ, ಎದ್ದೇಳೆದ್ದೇಳಾಚೆಗೆ. ಬೆರಳು ಕೊಟ್ಟರೆ ಹಸ್ತಾನೇ ನುಂಗ್ತೀರೀ ನೀವು—ನಾಯಿಗಿಂತ ಕಡೆ ನೀವು. ಎದ್ದುನಡಿ ಆಚೆಗೆ."

ಅಷ್ಟಕ್ಕೇ ಬಿಡಲಿಲ್ಲ, ಅಲ್ಲಿಯೇ ಜಗುಲಿಯ ಮೇಲೆ ಮೂಲೆಯಲ್ಲಿ ನೇತು ಹಾಕಿದ್ದ ಬಾರುಕೋಲು ತಂದು ನಾಲ್ಕೇಟು ಬಿಗಿದೇಬಿಟ್ಟರು. ಚಿಕ್ಕರಂಗ ಸಂತೋಷದಿಂದ ಏಟುತಿಂದ, "ಹೊಡೀರಿ ನನ್ನ ತಂದೆ ನೀವಲ್ಲದೆ ಇನ್ನ್ಯಾರು ಹೊಡೀಬೇಕು ನನ್ನ" ಎಂದ. ಎದ್ದು ಹೊರಡಲು ಅನುವಾದ. ಕಣ್ಣಿನಲ್ಲಿ ನೀರೂ ಬರಲಿಲ್ಲ, ಅಳಲೂ ಇಲ್ಲ. ದುಃಖವೇನೋ ಬಂದಿದ್ದೀತು, ದಿನದಿನವೂ ಗಳಿಗೆ ಗಳಿಗೆಯೂ ಅಂಥವರಿಗೆ ಗೋಳು ಇದ್ದದ್ದೇ. ದಿನಾ ಸಾಯುವವರಿಗೆ ಅಳುವರ‍್ಯಾರು ಎಂದುಕೊಂಡುವೇನೋ ಕಣ್ಣುಗಳು. ಮುಖದಲ್ಲಿ ಹೆಣದ ಕಳೆ ಇದ್ದರೆ ಇನ್ನು ಯಾವ ಭಾವ ಭಾವನೆಗಳು ಮೂಡಿಯಾವು?

ಚಿಕ್ರಂಗ ಕಾಲು ಕೀಳಲಾರದೆ ಕಿತ್ತುಕೊಂಡು ಯಜಮಾನ ಬೆದರಿಸಿದ ನಾಯಿ ದೂರಸರಿದು ಹೋಗುವಂತೆ ಮನೆಗೆ ಹೊರಟ. ಮನೆಗಲ್ಲ, ಆ ಹರಕು ಮುರುಕು ಹುಲ್ಲು ಜೋಪಡಿಗೆ. ಆ ಊರಲ್ಲಿ ಇನ್ನು ಮೂರು ನಾಲ್ಕು ಜನದ ಹತ್ತಿರ ದವಸವಿದೆ. ಅವರೇಕೆ ಕೊಡುತ್ತಾರೆ? ಇವನಿಗೇನು ಮನೆ ಇದೆಯೆ? ಮಾರು ಇದೆಯೆ? ಸಂಬಳ ಇಡೋದಕ್ಕೆ ಬೇರೊಬ್ಬ ಮಗನಿದ್ದಾನೆಯೆ? ಏನೂ ಇಲ್ಲ. ಒಬ್ಬರಿಗೆ ವಿದ್ಯೆ ಆಸ್ತಿಯಂತೆ, ಇನ್ನೊಬ್ಬರಿಗೆ ಬುದ್ಧಿ ಆಸ್ತಿಯಂತೆ, ಮತ್ತೊಬ್ಬನಿಗೆ ಕುಲವೇ ಆಸ್ತಿ—ಅನೇಕರಿಗೆ ಅವರ ಹೊಲ ಮನೆ ಆಸ್ತಿ; ಚಿಕ್ಕ ರಂಗನಿಗೆ ತನ್ನ ಮಗನೇ ಆಸ್ತಿ. ಅದನ್ನು ಆಗಲೇ ಅನ್ನದಾನಪ್ಪನವರಿಗೆ ಭೋಗ್ಯಮಾಡಿ ಕೊಟ್ಟಿದ್ದಾನೆ. ಇನ್ನಾರು ಇವನನ್ನು ಸೀಯುವರು? ಅದಕ್ಕೇ ಸೀದ ಮನೆಗೆಹೋಗಿ ಬಿದ್ದುಕೊಂಡ.

ತೂರ‍್ಯ, ಇವನೇ ಚಿಕ್ಕರಂಗನ ಹುಡುಗ—ಬಂದಿದ್ದು ರಾತ್ರಿ ಊಟದ ಹೊತ್ತಿಗೆ. ಊಟದಹೊತ್ತು ಎಂದೆ, ತಿನ್ನೋದಕ್ಕಿದ್ದರೆ ಊಟದಹೊತ್ತು ಇಲ್ಲದಿದ್ದರೆ ಉಪವಾಸದಹೊತ್ತು. ಅಂದೇನೋ ಹೊಟ್ಟೆಗಿತ್ತು. ಕತ್ತಲಲ್ಲೇ ಊಟಮಾಡಿ ತಂದೆ ಮಕ್ಕಳು ಮಲಗಿದರು.. ಮಲಗಿದರು ಅಷ್ಟೆ. ನಿದ್ರೆಗೂ ಇವರ ಮೇಲೆ ಕರುಣೆಯಿಲ್ಲ ಒಬ್ಬೊಬ್ಬರನ್ನೂ ಒಂದೊಂದು ರೀತಿಯ ಚಿಂತೆ ಹರಿದು ತಿನ್ನುತ್ತಿದೆ.

ಹೊರಗಡೆ ಕತ್ತಲು—ಮನೆಯೊಳಗೂ ಕತ್ತಲು—ಇವರ ಅಂತರಂಗದೊಳಗೂ ಕತ್ತಲು. ಮಳೆಗಾಲದ ತಂಡಿಗಾಳಿ ಸೊಪ್ಪಿದಂಟಿನ ನೆರಕೆಯೊಳಗಿಂದ ಒಳಗೆ ನುಗ್ಗುತ್ತಿದೆ, ಸುಯ್ಯೆಂದು ಬುಸುಗುಡುತ್ತಿದೆ. ಒಂದೊಂದೇ ಹನಿ ತಟತಟ ಉದುರುತ್ತಿದೆ. ಊರು ನಿದ್ರಿಸುತ್ತಿದೆ. ಎಷ್ಟೋ ಹೊತ್ತಾದ ಮೇಲೆ ಮೌನ ಮುರಿದುಬಿತ್ತು. ಚಿಕ್ಕರಂಗ ಮಾತಿಗೆ ಮೊದಲು ಮಾಡಿದ.

"ತಮ್ಮಾ, ತೂರ್‍ಯಾ."

"ಓ."

"ನಿದ್ದೆ ಬರಲಿಲ್ಲವಾ?"

"ಇಲ್ಲ."

"ಹಗಲೆಲ್ಲಾ ದುಡಿದು ದಣಿದು ಬಂದಿದ್ದೀ, ನಿದ್ದೆ ಬರಲೇ ಇಲ್ಲವಾ? ಬಡವರಿಗೆ ಹಂಗೇ."

"ಹಿಂಗೇ ಏನೋ ಯೋಚಿಸ್ತಾ ಇದ್ದೇನಪ್ಪಾ, ಅದಕ್ಕೇ ನಿದ್ದೆ ಬರಲಿಲ್ಲ ಇಷ್ಟೊತ್ತಾದ್ರೂ."

"ಅದೆಂತಾ ಯೋಚ್ನೆಪ್ಪಾ?........ಅಕ್ಕೋ ಮರೆತಿದ್ದೆ ಆ ಗಾರ್ಡ್ ಅಷ್ಟು ತರಾತುರಿಯಿಂದ ಯಾಕೆ ನಿಮ್ನೆಲ್ಲಾ ಎಳಕೊಂಡು ಹೋಗಿದ್ದು? ಮುಂಗಡ ಕೂಲೀನೂ ಕೊಟ್ಟು?" ಬೆಳಗಿನಿಂದ ಕುತೂಹಲ ಅವನನ್ನು ಬಾಧಿಸುತ್ತಿತ್ತು.

ಅದನ್ನ ಕೇಳಿದರೇ ನೀನು ಬಾಯಾಗೆ ಬೆರಳು ಕಚ್ಚಿಕೊಂಡೀ ಬಿಡು! ಹೌಹಾರಿ ದ್ಯಾಸುಹಾರಿ ಬಿದ್ದುಬಿಟ್ಟೀ"

"ಏನಾರಾ ಆಗಲಿ, ಹೇಳಿಬಿಡು, ದ್ಯಾಸುಹಾರಿ ಬಿದ್ದರೆ ಚಿಂತೆ ಕಾಟ ತಪ್ಪಿತು. ಸತ್ತರೆ ಶನಿ ತೊಲಗಿತು."

"ಏನು ಹೇಳ್ತಿ ಬಿಡಪ್ಪ. ಆ ಸಕ್ರೆಬಯಲು ಮೂಲೇ ಒಳಗೆ ಯಾರ್ಕೇಳ್ತಾರೆ?—ಕತ್ತಲು ಗಡುಸ್ತಿತ್ತು ಆರಣ್ಯ."

"ಹೌದು ಹೌದು ಬಾರಿಕಾನು, ಬಾರಿಕಾನು! ನಾನೂ ನೋಡಿದೇನೆ"

"ಆ ಪಾಟಿಕಾನು ಇದ್ದದ್ದು ಈಗ ಬಟ್ಟಂಬಯಲಾಗೇತೆ"

"ಯಾಕೆ? ಸಕ್ರೆ ಬಯಲು ಬಯಲೇ ಆಗಿಬಿಟ್ಟಿತಾ?"

"ಅಲ್ಲೇನಪ್ಪ ಈಗ!—ಏಳೆಂಟು ಕರಗಸದ ಗುಂಡಿ! ಕಳ್ಳ ಗುಂಡಿಗಳು."

"ಹೂಂ!" ಚಿಕ್ರಂಗನಿಗೆ ಸೋಜಿಗ.

"ಸಾಗುವಾನಿ ಕಡಿಸೋದು, ಅವನ್ನ ಕರಗಸದ ಗುಂಡಿಗೆ ತೊಲೆ ಜಂತೆ ಹಲಗೆಗಳು ಮಾಡ್ಸಿ ಪ್ಯಾಟೆ ಊರಿಗೆ ಸಾಗ್ಸೋದು"

"ಯಾರು, ಲಂಬಾಣೇರೋ? ಕೊರಚರೋ? ಹೊಲೇರೋ?" ಚಿಕ್ರಂಗನಿಗೆ ಅವರ ಮೇಲೆ ಸಂಶಯ. ತೂರ್ಯ ಅಂದ.

"ಛೆ, ಛೆ, ಬಿಡಪ್ಪ ಅವರ ಕೈಯಿಂದ ಏನಾದೀತು. ಗಾರ್ಡೇ ಕರದೊಯ್ಯ್ಲಿಲ್ವಾ ನನ್ನೆಲ್ಲಾ? ಬಾರಿ ಬಾರಿ ದಿಮ್ಮಿಗೊಳ್ನ ಕರಗಸದ ಗುಂಡಿಗೆ ಸಾಗಿಸಬೇಕಾಗಿತ್ತು ಅದಕ್ಕೇ ಕೇರಿ ಮಾದಿಗರ್ನೆಲ್ಲಾ ಕರ್ಕೊಂಡು ಹೋಗಿದ್ದು."

"ಹಾಡೇ ಹಗಲೆ!"

"ಬಲ ಹಂಗೈತೆ ಕಣಪ್ಪಾ ಅವರಿಗೇ! ಅಂತವರಿಗೆ ಹಗಲೇನು ರಾತ್ರಿಯೇನು? ದಿಂಡದ ಪ್ಯಾಟೆ ಸಾವ್ಕಾರ್ರು, ಸುಗ್ಗೀಹಳ್ಳಿ ಶಾನುಬಾವರು, ದೊಡ್ಡಿಕೊಪ್ಪದ ಗೌಡರು, ರೇಂಜರು ಎಲ್ಲಾ ಪಾಲ್ದಾರ್ರೇ ಅಂತೆ! ಏನಾಯ್ತು ಅಂತೀ, ಇವೊತ್ತು ಹಗಲೂಟದ ಹೊತ್ತಿನಾಗ: ನಮ್ಮಷ್ಟಕ್ಕೆ ನಾವು ಮುಂದೆ ನೋಡಿ ತೊಲೆ ಸಾಗಿಸ್ತಾ ಅದೇವೆ, ಒಂದು ಮೂರು ನಾಲ್ಕು ಜನ ಬಿಳ್ಳೆ ಜವಾನರು ಪೋಲಿಸಿನೋರು ಹಾಕೊಂತಾರಲ್ಲಾ ಅಂತವೇ ಅಂಗಿ ಅರಿವೆ ಹಾಕ್ಕೊಂಡಿದ್ರು— ಬಂದು ನಿಂತುಬಿಟ್ಟದಾರೆ. ನಾವು ನೋಡಿದೋರೇ ಬೆಪ್ಪಾಗಿ ನಿಂತುಬಿಟ್ವಿ, ಅರೇದ ಮುಂಕುಗಳು. ಗಾರ್ಡು ಬಂದು "ಏ ಪುಕುಲಗಳಾ, ಮುಂದೆ ನೋಡಿ ದಿಮ್ಮಿ ಎಳೀರೋ. ನಾನಿದ್ದಂಗೆ ನಿಮಗ್ಯಾಕ್ರೋ ಹೆದರಿಕೆ" ಅಂದ. ನಮ್ಮ ಕೆಲಸ ಮುಗಿಸಿದೆವು.

"ಏನು ತೊಲೆತುಂಡು ಬಿತ್ತಪ್ಪಾ! ಬಾರಿ ನಾಟ, ಬಾರಿ ಬಾರಿ ನಾಟ ಈ ಕಳ್ಳರಿಗೆ ಹೇಳೋರು ಕೇಳೋರು ಯಾರೂ ಇಲ್ಲೇನಪ್ಪ?"

"ಅಯ್ಯೋ ನನ್ಮಗನೆ, ಜಾಣಹುಚ್ಚಕಣೋ ನೀನು. ಹೇಳೋರು ಕೇಳೋರು ಇರೋದು ಬಡವರಿಗೆ ದಿಕ್ಕಿಲ್ಲದವರಿಗೆ, ಹೊಟ್ಟೆಗೆ ಇಲ್ಲದೋರಿಗೆ. ದೊಡ್ಡೋರಿಗಲ್ಲ" ಅವನು ಆಲೋಚಿಸಿ ಹೇಳಿದ ಮಾತಿರಲಾರದು, ಅನುಭವಿಸಿ ಹೇಳಿದ್ದಿರಬೇಕು ಆ ಮಾತು.

"ನೀನು ಹೇಳೋದು ಸೈಬಿಡಪ್ಪ. ನನಗೂ ಹಂಗೇ ಅನ್ನಿಸ್ತು. ಆದರೂ ಅವರಿಗೆ ನಾವೂ ಒಂದು 'ಕಸಬು' ಯಾಕೆ ಮಾಡಬಾರದೂ ಅಂತೇನೆ"

ಎಂದಿಲ್ಲದ ಸ್ಫೂರ್ತಿ ಅವನ ಮಾತಿನಲ್ಲಿ ತೋರುತ್ತಿದೆ. ಆ ಮಾತಾಡುವುದು ಹಾಸ್ಯಕ್ಕಲ್ಲ, ಸಿಟ್ಟಿನಿಂದ ಅಲ್ಲ; ಒಳಿತು ಕೆಡಕು ತೂಗಿ ನೋಡಿ ಆ ನಿರ್ಧಾರಕ್ಕೆ ಬಂದಿರುವಂತಿದೆ.

ಚಿಕ್ರಂಗ ಎಂದೂ ತುಡುಗು ಮಾಡಿದವನಲ್ಲ. ಕಳ್ಳತನ, ಕುಡಿತ, ಸುಳ್ಳು ಈ ದುರ್ಗುಣಗಳಿಗೆ ರವೆಯಷ್ಟೂ ಎಡೆಗೊಟ್ಟವನಲ್ಲ. ಮಗನಿಗೆ ಹೇಳಿದ.

ಅಯ್ಯೋ ಹುಚ್ಚ, ಸತ್ತೇವು (ಸತ್ಯ) ದಿಂದ ಬಾಳಿದರೆ ದೇವರೆಂದೆಂದಿಗೂ ಕೈಬಿಡೋದಿಲ್ವಪ್ಪ. ಗೋವಿನ ಹಾಡು ಕೇಳಿಲ್ವಾ?

ಸತ್ಯವೇ ನಮ್ಮ ತಾಯಿತಂದೆ,
ಸತ್ಯವೇ ನಮ್ಮ ಸರ್ವಬಳಗವು
ಸತ್ಯವಾಕ್ಯಕೆ ತಪ್ಪಿದಾರೆ
ಅಚ್ಚುತಾ ಹರಿಮೆಚ್ಚನು

ಈ ಪದವೇ ಸಾಕಪ್ಪ. ಇನ್ನು ಹೆಚ್ಚಿಗೆ ಗಾದೆ ಗ್ರಂಥ, ಓದು ಬರಾವು ಯಾಕೆ ಬೇಕು? ಮತಿಗೆಟ್ಟರೂ ಬತ (ವ್ರತ) ಗೆಡಬಾರದುಕಣೋ ತಮ್ಮ."

ತೂರ್ಯ ಇನ್ನೂ ಎಳಸು. ಆಗತಾನೆ ಕಣ್ಣು ತೆರದು ಪ್ರಪಂಚವನ್ನು ನೋಡುತ್ತಿದ್ದಾನೆ, ಹದಿನಾರು ಹದಿನೇಳು ವಯಸ್ಸಿನ ಏರುಹರಯದವನು. ನೀತಿ, ಧರ್ಮ, ಸತ್ಯ, ಇವನ್ನು ಉಪದೇಶ ಮಾಡುವವರೇ ಹೊಲ್ಲದ ಕಾರ್ಯದಲ್ಲಿ ತೊಡಗಿರುವುದನ್ನು ಕಣ್ಣಾರೆ ಕಂಡವನು. ಹೊಟ್ಟೆ ತುಂಬಿದವರೇ ಹೊಟ್ಟೆ ಹೊರಕರಂತೆ ಮಾಡುವುದನ್ನ, ಬೇಲಿಯೇ ಎದ್ದು ಹೊಲ ಮೇಯುತ್ತಿರುವುದನ್ನ ನೋಡಿ ಉರಿದೆದ್ದವನು.

"ನೀತಿ, ಧರ್ಮ, ಸತ್ತೇವು, (ಸತ್ಯ) ಕಾನೂಲು ಅವರು ಹೇಳಬೇಕು, ಅಷ್ಟೆ. ಅದರಂತೆ ನಡೆದುಕೊಳ್ಳೋರು ನಮ್ಮಂತ ಬಡಕು ಬಗ್ಗುಗಳು ಅಂತ ನೀನೇ ಹೇಳಿದೆಲ್ಲಪ್ಪಾ! ಹೋಗಲಿ, ಸಾವ್ಕಾರ್ರ ಹತ್ರ ಹೋಗ್ತೇನೆ ಅಂದಿದ್ದೆಲ್ಲಾ. ಹೋಗಿದ್ದೆಯಾ? ಜ್ವಾಳ ಕೊಡ್ತೇವೇ ಅಂದ್ರಾ?........ಒಳ್ಳೇ ಕಾಲ ಬಂದಾಗ ಹಗಲೂ ರಾತ್ರಿ ದುಡಿದು ತೀರಿಸಿದರಾತು."

ದಾರುಣ ವ್ಯಥೆಯೇ ಬಳ್ಳಿಯಾಗಿ ಆಬಳ್ಳಿ ಒಂದು ಕರೀಮುಳ್ಳಿಗೆ ಹೂವು ಬಿಟ್ಟಂತೆ ಇದ್ದುವು—ಚಿಕ್ರಂಗನ ನುಡಿಗಳು.

"ಹೋಗಿದ್ದೆನಪ್ಪ, ಹೋಗಿದ್ದೆ. ಇವೊತ್ತು ಮದ್ಯಾನ ಹೋಗಿದ್ದೆ. ಅವರನ್ನೇ ನಂಬಿಕೊಂಡಿದ್ದೆ—ಕೈಬಿಡಲಾರರು ಅಂದುಕೊಂಡಿದ್ದೆ. ನಡು ನೀರೊಳಗೆ ಕೈಬಿಟ್ಟರು ನನ್ನ ಮಗನೆ" ಎಂದ—ನಿಡಿಯುಸುರು ಬಿಟ್ಟು. ಸಾವ್ಕಾರ ಅನ್ನದಾನಪ್ಪನಿಂದ 'ಬಾರಿಕೋಲು' ಏಟು ತಿಂದ ಸಂಗತಿಯನ್ನು ಬಾಯಿಬಿಡಲಿಲ್ಲ. ಮಗನ ಕರುಳು 'ಚುರುಕ್' ಎನ್ನುವುದಿಲ್ಲವೆ?

ಮತ್ತೂ ತೂರ್ಯ ತನ್ನ ವಿಚಾರವನ್ನು ಮುಂದುವರಿಸಿಯೇ ಇದ್ದ.

"ನೀನು ಆಟೊಂದು ದರ್ಮ, ಶಾಸ್ತ್ರ ಊದುತೀಯಲ್ಲಾ! ಬೇಡಿಕೋಬೇಕಾಗಿತ್ತು: 'ನೀವು ಪುಣ್ಯವಂತರು, ದೇವರ ದಯೆವುಳ್ಳೋರು, ನಿಮ್ಮಂತವರು ಇಂತ ಕೆಡುಗಾಲದೊಳಗೆ ನಮ್ಮಂತ ಪರದೇಶಿಗಳ ಭಾರ ಹಿಡೀಬೇಕು; ಇಲ್ಲದಿದ್ರೆ ನಮ್ಮ ಗತಿಯೇನು?' ಅಂತ."

"ಹಂಗಂದ್ರೆ ಕೇಳ್ತಾರ? ನಿನ್ನ ಹಣೆ ಮುಟ್ಕೊಕೋ ಅಂತಾರೆ. ಹೌದು ಕಣೋ ತಮ್ಮ—ಹಿಂದಿನ ಜಲುಮದಾಗೆ ಅವರು ಕೊಟ್ಟು ಹುಟ್ಟಿದರು, ನಾವು ಕೊಟ್ಟು ಪಡೀಲಿಲ್ಲ—ಪಾಪಿಗಳು."

ಸ್ವಲ್ಪಹೊತ್ತು ಮೌನ.

ಮಾತು ಅಲ್ಲಿಗೇ ನಿಂತಿದ್ದರಿಂದ ಮತ್ತೆ ನಿಶ್ಯಬ್ದತೆ ಬಾಯಿಗೂಡಿತು. ಅದೇ ಕಗ್ಗತ್ತಲು. ಸುತ್ತಲೂ ನೂರಾರು ಕಾಲುಸರ್ಪಗಳು ಉಸಿರೆಳೆದು ಬಿಡುತ್ತಿರುವಂತೆ ಕಾಣುತ್ತಿದೆ, ಆ ಗಾಳಿ. ಮಳೆ ಜಿನುಗುವ ಸದ್ದುಮಾತ್ರ ಕೇಳಿಸುತ್ತಿದೆ. ದೂರದ ಹುಣಿಸೆಮರದಲ್ಲಿದ್ದ ಗೂಗೆಯೊಂದು 'ಗೂಕ್ ಗೂ, ಗೂಕ್' ಎಂದು ಕೂಗಿ ತೂರ್ಯನ ನಿರ್ಧಾರಕ್ಕೆ 'ಸೈ' ಎನ್ನುವಂತಿದೆ. "ಹೂಂ ಅದೇ ಸರಿ" ಎಂದು ಮೇಲಕ್ಕೆದ್ದ ತೂರ್ಯ.

"ಅಪ್ಪಾ"

"ಆಂ"

"ಇವೊತ್ತು ಶ್ರಾವಣದ ಅಮಾಸೆ, ಅಲ್ಲವಾ?"

"ಹೂಂ, ಯಾಕೆ? ಸೊಲ್ಪ ಜೊಂಪು ಹತ್ತಿತಪ್ಪ. ಕೂಗಿಬಿಟ್ಟೆ ನೀನು. ಬಡಿದು ಎಬ್ಬಿಸಿದ ಹಂಗೆ ಆತು."

ನಾಳೆತನಕ ಯಾಕೆ ಕಾಯೋದು? ಹೊಟ್ಟೇಲಿ ಅನ್ನ ಅಲ್ಪಸ್ವಲ್ಪ ಉಳಿದಿದ್ದಾಗಲೇ, ರಟ್ಟೇಲಿ ಆಷು ಇದ್ದಾಗಲೇ ನಮ್ಮ ಬದುಕು ಮಾಡಿಕೋ

ಬೇಕು ಗಾಳಿ ಬಂದಾಗ ತೂರಿಕೊಂಡಂಗೆ—ಹೀಗೆಂದುಕೊಂಡ ತೂರ್ಯ. ಅಪ್ಪ ನನ್ನು ಕರೆದು—

"ಆ ಮುರುಕು ಗುದ್ದಲಿ ಇತ್ತಲ್ಲಾ ಏನಾಯ್ತಪ್ಪ?"

"ಇಲ್ಲೇ ಮೂಲ್ಯಾಗೈತೆ. ಅದೊಂದೇ ನಮ್ಮ ಆಸ್ತಿ. ಈಗ್ಯಾಕೋ ತಮ್ಮ ಅದರ ಮಾತು—ಇಷ್ಟೊತ್ತಿನಾಗ?" ಎಂದ. ತನ್ನೊಳಗೇ "ಅದರಿಂದ ಗುಂಡಿ ತೆಗೆದು ನನ್ನ ಹೂಣಾಕ? ದುಡೀಲಾರದವನು, ಮಗನಿಗೆ ಆಸ್ತಿ ಮಾಡ ಲಾರದವನು, ಮಗನನ್ನು ಅಡ ಇಟ್ಟವನು ಅಂತ?" ಎಂದುಕೊಂಡ. ಅಳುತ್ತಿದ್ದನೋ ಏನೋ ಕತ್ತಲಲ್ಲಿ ಮಗನಿಗೆ ಹೇಗೆ ಕಾಣಿಸಬೇಕು? ದನಿಮಾತ್ರ ನಡುಗುತ್ತಿತ್ತು, ನಿಟ್ಟುಸಿರು ದೂರಕ್ಕೂ ಕೇಳಿಸುವಂತಿತ್ತು.

"ಯಾಕಪ್ಪಾ ಸುಮ್ನೆ ಕೊರಗ್ತೀ. ಸುಮ್ನಿರು ನಾಳೆಯಿಂದ ನಾವೆಲ್ಲಾ ಸುಖವಾಗಿರ್ತೇವೆ. ಅವ್ವ ಊರಿಂದ ಬಂದು ಮೂಗಿನ ಮ್ಯಾಲೆ ಬೆರ ಳಿಟ್ಟುಕೋಬೇಕು, ಹಂಗೆ ಮನೆ ತುಂಬ್ತೇನೆ. ನಿನ್ನ ಗೊಂಗಡಿ ಗಟ್ಯಾಗೈತೆ ಹೆಂಗೆ?"

"ಹೂಂ ಗಟ್ಯಾಗೈತೆ, ಗಟ್ಯಾಗೆ! ನನ್ನ ಹಂಗೆ ಅದೂ ಜಾಳ— ಮಿಾನುಬಲೆ ಹಂಗೆ. ಕಲ್ಲುಕಟ್ಟಿ ಸೆಳೆದಿದ್ದನೇನೋ ಅನ್ನಿಸ್ತದೆ."

"ನನ್ನ ಬಟ್ಟೆಗಳು ಯಾವುದೂ ಗಟ್ಯಾಗಿಲ್ಲ. ಮನೆಯಾಗೆ ಒಂದು ಚೀಲವೂ ಇಲ್ಲ. ಏನು ಮಾಡೋದು?"

"ಯಾತಕ್ಕಪ್ಪ? ಹೊನ್ನು ತುಂಬಿಡಬೇಕಾ?"

"ಯಾತಕ್ಕೇ ಅನ್ನೋದು ಹೇಳ್ತೇನೆ, ಒಂದು ಪಂಚೆಯೋ ಒಲ್ಲಿಯೋ ಬೇಕಾಗಿತ್ತು."

"ಯಾಕೆ ಚಳಿಯಾಗ್ತದೇನೊ ಮಗಾ?"

"ಛೀ, ಬಿಡಪ್ಪ. ಚಳಿ ಏನ ಮಾಡೀತು! ಅದಕ್ಕೆಲ್ಲಾ ಮೈ ಒಗ್ಗೇತೀ........ಒಂದು ಕೆಲಸಕ್ಕೆ ಬೇಕು" ಎಂದ ಅರ್ಥಪೂರ್ಣ ಧ್ವನಿಯಲ್ಲಿ.

"ಸೀರೆ ಆದರೆ ಆದೀತಾ? ಆಕೆದೊಂದು ಮದುವೆ ಸೀರೆ ಐತೆ ನೋಡಪ್ಪಾ. ಉಟ್ಟರೆ ಎಲ್ಲಿ ಹರಿದೀತೋ ಅಂತ ಜೋಪಾನವಾಗಿ ಇಟ್ಟದಾಳೆ."

"ಹೂಂ, ಅದಕ್ಕೇನು? ಒಲ್ಲೆ ಅನ್ನತದಾ?"

"ಅಲ್ಲೇ ನಿನ್ನ ತಲೆ ಕಡೆಗೆ ಬಿದಿರು ಪೆಟ್ಟಿಗೆ ಐತಲ್ಲಾ, ಅದರ ಒಳಗೆ ಐತೆ ನೋಡು. ಅಂದರೆ ಮಾತ್ರ ಯಾತಕ್ಕೇ ಅನ್ನೋದು ಹೇಳಬೇಕು ನೋಡಪ್ಪ"

ತೂರ್ಯ ಬಿದಿರು ಪೆಟ್ಟಿಗೆಯ ಹತ್ತಿರ ಹೋಗುತ್ತಿದ್ದಾಗ ಕಾಲಿಗೆ ಮೆತ್ತಗೆ ಇರುವುದು ಏನೋ ತಾಗಿತು. ಆಗ ತೂರ್ಯಗೆ ಎಲ್ಲಾ ನೆನಪಾಯಿತು. ಚಿಕ್ರಂಗನಿಗೆ ಹೇಳಿದ.

"ಅಲಲಲಲ, ಎಂತಾ ಮರವು ನನಗೆ! ತೊಲೆ ತುಂಡು ಹೆಗಲಿಗೆ ಒತ್ತ್ಯಾವು ಅಂತ ಗಾರ್ಡು ಎಲ್ಲರಿಗೂ ಒಂದೊಂದು ಗೋಣಿಚೀಲ ಕೊಟ್ಟ. ನಾನು ಅದನ್ನು ಹಿಂತಿರುಗಿ ಕೊಡಲೇಬಾರದ? ಈಗ ಎಲ್ಲಾ ನೆನಪಾಗ್ತದೆ ನೋಡಪ್ಪ."

"ಕೆಟ್ಟವರ ಗಾಳಿ ಬೀಸಿದರೆ ಕೆಟ್ಟ ಬುದ್ದೀನೇ ಕಣೋ. ನಾವೂ ಒಂದು ಕಳ್ಳಕಸಬು ಮಾಡಾನಾ ಅಂತ ಕೇಳಿದೆಲ್ಲಾ ಯಾಕೆ? ಆ ಆ, ಅವರ ಗಾಳಿನೇ ನಿನ್ನ ಬುದ್ದಿ ಕೆಡಿಸಿರೋದು."

ತೂರ್ಯಾ ಗುದ್ದಲಿ ಹಿಡಿದೇಬಿಟ್ಟ. ಗೋಣಿಚೀಲವನ್ನು ಬಗಲಿಗೇರಿಸಿದ. 'ಏಳಪ್ಪ, ಹೋಗಾನ' ಅಂದ.

ಇವನಿಗೆ ಬೆರಗು. "ಎಲ್ಲಿಗೋ? ಏನೋ ಇದೆಲ್ಲಾ" ಎಂದ.

"ಮಾತು ಬೆಳಸಿ ಸುಮ್ನೆ ಕಾಲಹರಣ ಮಾಡಬ್ಯಾಡ, ಬಾ ಬಾ. ನಾಳೆ ಹೊಟ್ಟೆಗೇನು ಮಣ್ಣು ತುಂಬಿಕೋತೀಯಾ? ಏಳು ಸುಮ್ಮನೆ" ಗದರಿದ.

ಚಿಕ್ರಂಗನಿಗೆ ಏನೋ ಆಸೆ ಹೊಟ್ಟೆಯ ಕಡೆ ತನ್ನ ಗಮನ ಹರಿದೊಡನೆಯೇ ಮಗನನ್ನು ಹಿಂಬಾಲಿಸಿದ. ಇಬ್ಬರೂ ಮನೆಯಿಂದ ಹೊರಬಿದ್ದರು. ಇನ್ನೂ ಆ ಆಷಾಢದ ಗಾಳಿ ಬೀಸಿ ಬೀಸಿ ಹೊಡೆಯುತ್ತಿದೆ—ತಣ್ಣಗೆ ಕೊರೆಯುತ್ತಿದೆ. ಒಂದೊಂದು ಮಳೆ ಹನಿ ಉದುರುತ್ತಲೇ ಇದೆ. ಮುಗಿಲೆಲ್ಲ ಕರಿಯ ಮೋಡ. ಸುತ್ತಲೂ ಕತ್ತಲು. ಚುಕ್ಕೆಗಳು ಅಲ್ಲೊಂದು ಇಲ್ಲೊಂದು ಮೋಡದ ಮುಸುಗು ತೆಗೆದು ಒಂದೊಂದು ತಡವೆ ಇಣಿಕಿ ನೋಡಿ ಮತ್ತೆ ಮರೆಯಾಗುತ್ತಿವೆ. ಊರ ಜನವೆಲ್ಲ ಉಂಡು ಒಂದು ಜೊಂಪು ನಿದ್ರೆ ತೆಗೆದಿದೆ.

ಈ ಎರಡು ಜೀವಿಗಳು ಮಾತ್ರ ಊರಹೊರಗೆ ಕಣ ಕೊಪ್ಪಲುಗಳಿರುವ ಕಡೆಗೆ ಹೋಗುತ್ತಿದಾರೆ. ಮಗ ಮುಂದೆ; ತಂದೆ ಹಿಂದೆ.

ಊರ ಹಗೇವುಗಳೆಲ್ಲಾ ಇರುವುದು ಊರಹೊರಗಿನ ಆ ಕೊಪ್ಪಲಲ್ಲಿಯೇ. ಅನ್ನದಾನಪ್ಪನವರ ಹಗೇವನ್ನು ಮೊನ್ನೆತಾನೆ ತೆಗೆದು ಜೋಳ ತೋಡಿ ಕೊಂಡಿದ್ದರಿಂದ ಹೊಸಮಣ್ಣು ಹುಡಿಹುಡಿಯಾಗಿ ಬಿದ್ದು ಅದರ ಮೇಲೆ ಮಳೆಬಿದ್ದು ಅಲ್ಲಿ ಹೆಚ್ಚು ಕೆಸರಾಗಿದ್ದಿತು, ಹಗೆಯದ ಮೇಲಿನ ಮಣ್ಣು ಗುಡ್ಡೆಯ ಮೇಲೆ ಗುರುತಿಗಾಗಿ ಇಟ್ಟಿರುವ ಆ ಹಗೇವಿನ ಬಳಿಗೆ ಅನೇಕ ಸಾರಿ ಒಡಾಡಿ ತೂರ್‍ಯನ ಕಾಲುಗಳಿಗೂ ಚಿರಪರಿಚಯವಿದ್ದಿತು, ಆದುದರಿಂದ! ಅನ್ನದಾನಪ್ಪನ ಹಗೇವನ್ನು ಗುರುತು ಹಿಡಿಯುವುದು ಅಷ್ಟು ಕಷ್ಟವಾಗಲಿಲ್ಲ.

ತೂರ್‍ಯ ಹಗೇವು ತೆಗೆಯಲು ಷುರುವು ಮಾಡಿಯೇ ಬಿಟ್ಟ. ಚಿಕ್ಕರಂಗ ನಿಗೆ ಗಾಬರಿ, ಆಶ್ಚರ್‍ಯ. "ಏನೋ ಇದು. ಇಷ್ಟೊತ್ತಿನಾಗ ಹಗೇವು ತೆಗೆ ಯೋದು?" ಎಂದ. ಬೆದರಿದವನ ದನಿ.

"ಮಾತಾಡಬೇಡ ಸುಮ್ನಿರಪ್ಪ. ನಾನು ಹೇಳಿದಂತೆ ಕೇಳು" ಎನ್ನುತ್ತ ಅಗೆಯುತ್ತಲೇ ಇದಾನೆ. ಆ ಊರ ಹಗೇವುಗಳು ವಿಲಕ್ಷಣ. ಅವುಗಳ ದಡವನ್ನು ಕಂಡು ಹಿಡಿದು, 'ದಡಬಿಡಿಸು' ವುದು ಹಗಲುಹೊತ್ತೂ ಅತಿ ಕಷ್ಟವೇ. ಆದರೆ ತೂರ್‍ಯ ಆ ಹಗೇವನ್ನು ಮೊನ್ನೆತಾನೆ ತೆಗೆದಿದ್ದ. ಆದ ರಿಂದಲೇ ಗೋಡೆಯನ್ನು ಬಿಡಿಸುವುದು ಸುಲಭವೇ ಆಯಿತು. ಮಣ್ಣು ತೆಗೆದು ಹಾಕುತ್ತಿದ್ದಾನೆ ತೂರ್‍ಯ. ಹತ್ತಾಳಿನ ಕಸುವು ಬಂದಿದೆ ಅವನಿಗೆ. ಅಂದು ಹಗಲೆಲ್ಲಾ ದುಡಿದು ಹಣ್ಣಾಗಿ ಬಂದಿದ್ದರೂ ಅವನಗೆ ಆಯಾಸ ತೋರಲಿಲ್ಲ. ಒಂದು ಸೊಂಟಮಟ್ಟ ತೆಗೆದ ಮೇಲೆ ಕೂಲು ಸಿಕ್ಕಿತು. ಹುಲ್ಲು, ಅಡ್ಡಗಟ್ಟಿಗೆ ಗಳನ್ನು ತೆಗೆದು ನೆಟ್ಟಗೆ ನಿಂತ.

ಅಷ್ಟುಹೊತ್ತೂ ಚಿಕ್ರಂಗ ಗರ ಹೊಡೆದವನಂತೆ ನಿಂತಿದ್ದಾನೆ—ಮಗನ ಅಮಾನುಷ ಶಕ್ತಿಯನ್ನು ಕಂಡು. ತೂರ್‍ಯ ಹೀಗೇಕೆ ಮಾಡುತ್ತಿದಾನೆಂಬುದು ಅವನಿಗಿನ್ನೂ ಸಮಸ್ಯೆಯೇ. "ಇವನು ಹಗೇವು ತೆಗೆಯೋದು ಯಾಕೆ? ಇವನೂ ಕಳ್ಳತನದಿಂದ ಜೋಳ ಸಾಗಿಸಬೇಕೆಂದಿದಾನೆಯೆ? ಸಾವುಕಾರರೇ ಜೋಳ ತೆಗೆದು ಗಡಿದಾಟಿಸಿ ಕುಂಪಣಿ ಸೀಮೇಂಗೆ ಮಾರಬೇಕು ರಾತ್ರಿ ಹೋಗಿ ಹಗೇವುತಗೀ ಅಂತ ಹೇಳಿದ್ದರೆ?—ಅವರಿಗೇನು ಹೆದರಿಕೆ? ಹಗಲು

ಹೊತ್ತೇ ಸಾಗಿಸಬಹುದು........ಮತ್ತೆ ಇವನು ಚೀಲವನ್ನಾದರೂ ಯಾಕೆ ತಂದ ?"

ಇದೇ ಯೋಚನೆ ಚಿಕ್ರಂಗನಿಗೆ. ಕಳ್ಳತನ ಎಂದರೇನು ಎಂಬುದೂ ಗೊತ್ತಿಲ್ಲದ ಸಾಚಾ ಮನುಷ್ಯ ಇವನು. ಆದರೂ ಮನೆಯಲ್ಲಿ ಮಲಗಿದ್ದಾಗ ಮಗನ ವಿಚಾರಲಹರಿಯನ್ನು ನೋಡಿದ್ದನಲ್ಲ! ಆದಕ್ಕೇ ಮತ್ತೆ—

"ಇಷ್ಟೊತ್ತಿನಾಗ ಯಾಕೆ ಹಗೇವು ತೆಗೀತೀಯೋ? ಸಾವ್ಕಾರ್ರು ಹೇಳಿದ್ದರಾ ?"

"ಇಲ್ಲ, ನನ್ನ ಹೊಟ್ಟೆ, ನಿನ್ನ ಹೊಟ್ಟೆ, ಅನ್ನವಿಲ್ಲದೆ ಬೆನ್ನಿಗೆ ಹತ್ತಿ ಕೊಂಡಿರುವ ನಮ್ಮಂತ ಸಾವಿರ ಸಾವಿರ ಹೊಟ್ಟೆಗಳು! ಹೊಟ್ಟೆಗೆ ಬಟ್ಟೆಗೆ ಇದ್ರೂ ಕದ್ದು ನಾಟ ಸಾಗಿಸ್ತೀರೊ ಆ ಸಾವ್ಕಾರ್ರುಗಳು!!"

"ಹೂಂ, ಸರಿಯಪ್ಪ!" ಉಸುರಿದ ಚಿಕ್ರಂಗ.

"ಎಲ್ಲಿ? ನಿನ್ನ ಕಂಬಳಿ ಕೊಡಿಲ್ಲಿ, ಗಾಳಿ ಹೊಡೀತೇನೆ. ವಿಷ ಗಾಳೀನ ಗಡಗಡ ತೆಗಿಯಾನ.".

"ಬ್ಯಾಡಕಣೊ ನನ್ಮಗನೆ. ಪಾಪಕಾರ್ಯ ಇದು. ನಾವು ಮಾಡೋದು ಯಾರ ಕಣ್ಣಿಗೆ ಬೀಳದಿದ್ರೂ ಆ ಮ್ಯಾಗಳೋನಿಗೆ ಕಾಣಸಾಕಿಲ್ವಾ?"

"ಓಹೋಹೋ! ಕಂಡಿದೇನೆ ಕೊಡಪ್ಪಾ ಕಂಬಳೀಯ. ಇಷ್ಟು ದಿವಸ ಅವನ ಕಣ್ಣಿಗೆ ಬಿದ್ದಿರೋ ಹಂಗೆ ಬೀಳೋದು. 'ಹುಚ್ಚುಮುಂಡೆ ಮದುವ್ಯಾಗೆ ಉಂಡೋನೇಜಾಣ' ಮ್ಯಾಗಳವನೋ ಕೆಳಗಳವನೋ, ಸತ್ಯವೋ ಗಿತ್ಯವೋ ಹೊಟ್ಟೆಗೆ ಬಿದ್ದರೆ ಸೈ! ಸತ್ಯ ಸತ್ಯ ಅಂದವನು ಸತ್ತೇ ಸತ್ತ. ಕೊಡಪ್ಪ ಕಂಬ ಳೀನ—ಗಾಳಿ ಹೊಡೆಯಾನ."

"ಹುಗೇನಪ್ಪ" ಬಹಳ ನೊಂದುಕೊಂಡಿದ್ದ ಚಿಕ್ರಂಗ. ಮತ್ತೆ ಅಂದು ಮಧ್ಯಾಹ್ನ ಅನ್ನದಾನಪ್ಪ ಸಾವ್ಕಾರ್ರು ಹೊಡೆದದ್ದು ಅಂದದ್ದನ್ನೂ ನೆನೆಸಿ ಕೊಂಡ ನಾಳೆಗೆ ಹೊಟ್ಟೆಗಿಲ್ಲ ಇವನು ಹೇಳಿದ್ದು ಸರಿ ಎಂದುಕೊಂಡ. ಹೊತ್ತಿದ್ದ ಕಂಬಳಿಯನ್ನು ಸುಲಿದುಕೊಟ್ಟ. ಬರೀಮೈಲಿ ನಿಂತ. ಛೆ! ಛೆ! ಬರೀಮೈಯ ಲ್ಲಲ್ಲ, ಚಿಪ್ಪಿಗನ ಹೊಲಿಗೆಬಿದ್ದ ಕಡೆಯಲ್ಲೆಲ್ಲಾ ಸುಭದ್ರವಾಗಿಯೇ ಇದ್ದ ಅಂಗಿ ಅವನ ಮೈ ಸುತ್ತಿತ್ತು. ತೂರ್ಯ ಸ್ವಲ್ಪಹೊತ್ತು ಗಾಳಿ ಹೊಡೆದ.

"ನೀನು ಸುಸ್ತಾಗಿದೀ. ಎಲ್ಲಿ, ನಾನು ಸ್ವಲ್ಪ ಗಾಳಿ ಬೀಸ್ತೇನೆ" ಎಂದ ಚಿಕ್ರಂಗ. ತೂರ್ಯ ದಡಹತ್ತಿ ಬಂದು ಮೇಲೆ ನಿಂತ. ಆ ಹಗೇವುಗಳೋ ಗಡಿಗೆಯಂತೆ. ಬಾಯಿ, ಕೂಲು ಚಿಕ್ಕವು; ಇಳಿಯುತ್ತ ಇಳಿಯುತ್ತ ಅಗಲ. ಜೋಳ ಬೇರೆ ತಳದಲ್ಲಿದ್ದುವು. ಕಂಬಳಿಯನ್ನು ಪೂರ್ತಿ ಇಳಿಬಿಟ್ಟು ಗಾಳಿ ಬೀಸಬೇಕಾಯಿತು. ಮೇಲೆದ್ದು ಬರುತ್ತಿರುವ ಗವಲನ್ನು (ವಾಸನೆ) ಚಿಕ್ರಂಗ ಕುಡಿಯುತ್ತಲೇ ಇದ್ದ. ಸ್ವಲ್ಪ ಹೊತ್ತಿನಲ್ಲಿಯೇ—

"ಕಟ್........ಕಟ್........ಕಟ್" ಗಾಡಿಗಳ ಗಾಲಿಗಳ ಶಬ್ದ.

"ಹೇ, ಹೇ" ಕಳ್ಳರ ಗಂಟಲೇ!

ಶಬ್ದ ಅಷ್ಟು ಸ್ಫುಟವಾಗಿ ಕೇಳಿಸುತ್ತಿಲ್ಲ. ಆದರೂ ಸುಲಭವಾಗಿ ಊಹಿಸಬಹುದು—ಯಾರವೋ ಗಾಡಿಗಳು ಬರುತ್ತಿವೆ. ಎತ್ತುಗಳ ಕೊರಳುಗಳಿಗೆ ಗಂಟೆ, ಗೆಜ್ಜೆ ಇಲ್ಲ. ಬಂಡಿಯ ಕೀಲುಗಳಿಗೆ ಗಿಲಿಕೆ ಇಲ್ಲ. ಗಾಡಿಗಳಿಗೆ ದೀಪ ಮೊದಲೇ ಇಲ್ಲ. ಗಾಡಿ ಹೊಡೆಯುವವರು ಗಟ್ಟಿಯಾಗಿ ಬಾಯಿ ಮಾಡುತ್ತಿಲ್ಲ. ಮಳೆಬಿದ್ದು ನೆಲ ಮೆದುವಾಗಿದೆ, ಅದಕ್ಕೇ ಗಾಲಿಗಳ ಶಬ್ದ ಹೆಚ್ಚಿಲ್ಲ.

"ಅಪ್ಪಾ, ಯಾವೋ ಗಾಡಿ ಬರ್ತಾವಲ್ಲೋ, ಐದಾರು. ನೋಡಿದರೆ ಯಾರೋ ಕದ್ದು ಜ್ವಾಳ ಸಾಗಿಸ್ತಿದ್ದಾರೆ ಅಂತ ಕಾಣ್ತದೆ—ಕುಂಪಣಿ ಸೀಮೆಗೆ."

"ಹಂಗಾದರೆ ಗಾಡಿಗಳು ಇತ್ತಲಾಗೆ ಬರ್ತಾವೆ?"

"ಹೂಂ, ಇತ್ತಲಾಗೇ. ಬಂಡಿಹಾದಿ ಇಲ್ಲೇ ಐತೆ. ಗಾಡಿಗಳು ನಮ್ಮ ಹತ್ತರ ಹಾದೇ ಹೋಗೋದು. ಎಂತ ಕತ್ತಲಾದರೂ ಇಷ್ಟು ಹತ್ತರ ಅದೇವೆ, ಅವರೊಳಗೆ ಯಾರೊಬ್ಬನ ಕಣ್ಣಿಗಾದರೂ ಬಿದ್ದೇಬೀಳ್ತೇವೆ."

"ಹೆಂಗ್ಮಾಡಾನೋ ತಮ್ಮ?"

ಇಬ್ಬರೂ ಒಳ್ಳೇ ಪೇಚಿಗೆ ಸಿಕ್ಕಿಬಿಟ್ಟರು. ಇಬ್ಬರಿಗೂ ಏನೂ ಹೊಳೆಯದು, ಗಾಡಿ ತೀರ ಹತ್ತಿರಕ್ಕೇ ಬಂದುಬಿಟ್ಟವೆ. ಶಿಟ್ಟಿನಲ್ಲಿದ್ದವರಿಗೆ ಬೆದರಿದವರಿಗೆ ಬುದ್ಧಿ ಎಲ್ಲಿ ಹಿಡಿತದಲ್ಲಿರುತ್ತದೆ! ಇಬ್ಬರೂ ತಡಬಡಾಯಿಸುತ್ತಾ ಇದಾರೆ. ಓಡಿಹೋದರೂ ಕಾಣಬೇಕು—ಅಷ್ಟು ಹತ್ತಿರ ಬಂದಿವೆ ಗಾಡಿಗಳು.

"ನಾನು ಹಗೇವು ಇಳಿದು ಬಿಡುತ್ತೇನೆ, ನೀನೀ ಕಂಬಳೀನ ತಲೆಮ್ಯಾಲೆ ಎಳಕೊಂಡು ಹಗೇವದ ಕೂಲು (ದಡ-ಮುಚ್ಚುವಭಾಗ) ಮ್ಯಾಲೇ ಕೂತ್ಬಿಡು"

ಎಂದವನೇ ಚಿಕ್ರಂಗ ಹಗೇವು ಧುಮುಕಿಯೇ ಬಿಟ್ಟ. ತೂರ್ಯ ಕೂಲ ಮೇಲೆ ಕುಳಿತ, ತಲೆಗೆ ಕಂಬಳಿ ಕವಚಿಕೊಂಡ.

ಗಾಡಿಗಳು ಬಂದದ್ದೂ ಆಯಿತು, ಹೋದದ್ದೂ ಆಯ್ತು. ಗಾಡಿಯವರ ಕಣ್ಣಿಗೇನೂ ಇವರು ಬೀಳಲಿಲ್ಲ. ತಾವು ಬದುಕಿದೆವೆಂದುಕೊಂಡರು. ಆದರೆ—

ಯಾರೋ ಗಾಡಿಗಳನ್ನು ಗಡಿ ದಾಟಿಸುವುದಕ್ಕೆ ಬಂದವರಿರಬೇಕು— ಅವನ್ನು ಮುಂದೆ ಹೋಗಬಿಟ್ಟು, ಹಗೇವದ ಸಮೀಪಕ್ಕೇ ಬರುವಂತಿದೆ ಗುಸುಗುಸು ಮಾತು ಕೇಳಿ ಬರುತ್ತಿದೆ. ತೂರ್ಯನಿಗೆ ಮಾತ್ರ ಕೇಳಿಸುತ್ತಿದೆ ಇವರು ಪಿಸುಗುಡುತ್ತಿರುವುದು. ಇವನೂ ಪಿಸು ಮಾತಿನಲ್ಲೇ "ಅಪ್ಪಾ ಇಲ್ಲೇ ಇರಪ್ಪಾ, ಇನ್ನು ಯಾರೋ ನಡಕೊಂಡು ಬರ್ತಿದಾರೆ. ನಾವು ಎದ್ದು ಓಡಿಹೋಗಿದ್ದರೆ ಚಂದವಿತ್ತು ಎಂದು ಉಸುರಿದ. ಬಂದವರು ಇವರನ್ನು ದಾಟಿ ಮುಂದಕ್ಕೂ ಹೋಗಲಿಲ್ಲ, ಹಿಂದಕ್ಕೂ ತಿರುಗಲಿಲ್ಲ ಅಲ್ಲಿಯೇ ಇವರಿಗೆ ತೀರ ಸಮೀಪದಲ್ಲಿಯೇ ಕುಳಿತುಬಿಟ್ಟರು. ಸ್ವಲ್ಪಹೊತ್ತು ಕಳೆಯಿತು.

ತೂರ್ಯ ಬಲೆಗೆ ಬಿದ್ದ ಚಿಗುರಿಯಂತಾದ. ಎದ್ದು ಹೋಗುವಂತಿಲ್ಲ, ಬಿಡುವಂತಿಲ್ಲ. ಮತ್ತೆ ಚಿಕ್ರಂಗ—

"ತಮ್ಮಾ, ಹೋದರಾ ಅವರು?" ದನಿಯಿಲ್ಲ. ಉಸಿರು ಮಾತ್ರ ಇದೆ.

ತೂರ್ಯಾ ಉತ್ತರ ಕೊಡಲಿಲ್ಲ. ಅವನಿಗೆ ಕೇಳಿಸಿತೋ ಇಲ್ಲವೋ. ಅವರಂತೂ ಮಾತನಾಡ ಕುಳಿತವರು ಕುಳಿತೇ ಬಿಟ್ಟಿದ್ದಾರೆ. ತೂರ್ಯಾ ಮಾತ್ರ ಇನ್ನೊಂದು ಸ್ವಲ್ಪ ಹೊತ್ತಲ್ಲವೆ?—ಇನ್ನೇನು ಎದ್ದು ಹೊರಟಾರು— ಇನ್ನೊಂದೇ ಗಳಿಗೆ—ಹೀಗೆಂದುಕೊಂಡೇ ಬಾಯಲ್ಲಿ ಅಕ್ಕಿಕಾಳು ಹಾಕಿಕೊಂಡಿದ್ದಾನೆ; ತಂದೆ ಆ ಗವಲನ್ನು ಎಷ್ಟುಹೊತ್ತು ತಾಳಿಕೊಂಡನೆಂದು ಗಾಬರಿಯಾಗಿದ್ದಾನೆ.

ಕೊನೆಗೆ ಆ ಮಂದಿ ಎದ್ದು ಗಾಡಿಗಳನ್ನು ಹಿಂಬಾಲಿಸಿದರು.

ಚಿಕ್ರಂಗ ಹಗೇವು ಇಳಿದು ಆಗಲೇ ಸುಮಾರು ಒಂದು ಘಂಟೆಯೇ ಆಗಿತ್ತು. ಮೇಲಿಂದ ಬೇರೆ ಗಾಳಿ ಸರಾಗವಾಗಿ ಬರುವಂತಿಲ್ಲ; ಕೂಲ ಮೇಲೆ ಮಗ ಕುಳಿತುಬಿಟ್ಟಿದ್ದಾನೆ.

"ತೂರ್ಯಾ" ಸಾಯಲು ದನಿ, ಆಗಲೇ ಶಕ್ತಿ ಕುಂದುತ್ತ ಬಂದಿದೆ.

"ಏನಪ್ಪಾ?" ತೂರ್ಯಾನೂ ಬೆದರಿಬಿದ್ದ.

"ಅಯ್ತ್ತಪ್ಪ ನನ್ನ ಆಟ........ಒಂದು ತೊಟ್ಟು........ನೀರು" ಗಂಟಲು ಬಿದ್ದಿದೆ, ಉಸಿರು ಸ್ವಲ್ಪ ಮಾತ್ರ ಇದೆ. ಅದೇ ಸಾಯಲು ದನಿ.

ತೂರ್‍ಯ್ಯಾ ಹಗೇವು ಇಳಿಯಲು ಅಣಿಯಾಗುವುದನ್ನು ಕಂಡ ಚಿಕ್ರಂಗ.

"ಇಳೀಬ್ಯಾಡ ನನ್ನ ಮಗನೆ, ಇಳೀಬ್ಯಾಡ. ಇಬ್ಬರೂ ಸಾಯಬೇಕ? ನೀರು........ನೀರು."

"ನಿನಗೆ ನೀರನ್ನೂ ಕೊಡಲಾರದವನಾದೆನಲ್ಲಪ್ಪಾ" ಎಂದು ತೂರ್‍ಯ ತಂದೆಯ ಮೈಮೇಲೆ ಕಣ್ಣೀರ್ಗರೆದ ಅಷ್ಟೆ. ಅಲ್ಲಿ ನೀರೆಲ್ಲಿಂದ ಬಂದೀತು.

"ನಾ ನು ಹೇ ಳಿ ದೆ ನ ಲ್ಲ ಪ್ಪ. ಸತ್ಯ... ....ಸತ್ಯ........ ಬಿಡ ಬಾ.... ರ........ದು........ಗೊರ್, ಗೊರ್, ಟಕ್.

ತೂರ್‍ಯನಿಗೆ ನಂಬಿಗೆಯಾಗಲಿಲ್ಲ. ಅಲ್ಲ, ನಂಬಲು ಅವನ ಮನಸ್ಸೊಪ್ಪಲಿಲ್ಲ. ಒಂದೇ ಏಟಿಗೆ ಹಗೇವು ಧುಮುಕಿ ತಂದೆಯ ಕೈಕಾಲು ಮೈ ಮುಟ್ಟಿ ನೋಡಿದ. ಹರಣ ಹಾರಿತ್ತು. ಆ ಗವಲು ತಡೆಯಲಾರದೆ ಕೂಡಲೇ ಮೇಲಕ್ಕೇರಿ ಬಂದ ಅದು ಹೇಗೆ ಮೇಲಕ್ಕೆ ಬಂದನೋ ದೇವರಿಗೇ ಗೊತ್ತು.

ಎಷ್ಟೋ ಹೊತ್ತು ಸುಮ್ಮನೆ ಕೂಲಿನ ಮೇಲಿಯೇ ಕುಳಿತಿದ್ದ. ಕಣ್ಣೀರು ಮಾತ್ರ ಅವಿಚ್ಛಿನ್ನವೇ ಧಾರಾಕಾರವಾಗಿ ಸುರಿಯುತ್ತಿವೆ, ತಂದೆಯ ಕಳೇಬರದ ಮೇಲೆ. ಇವನು ಘಟ್ಟಿಯಾಗಿ ಕೂಗಿಕೊಳ್ಳುವಂತಿಲ್ಲ ಮಾತಾಡುವುದಕ್ಕೆ ಹತ್ತಿರ ಯಾರೂ ಇಲ್ಲ. ಆ ಗುದ್ದಲಿ ಆ ಚೀಲ ಅಲ್ಲೇ ದಡದ ಮೇಲೆ ಬಿದ್ದಿವೆ. ಅವೂ ಸಹ ಇವನನ್ನು ನೋಡಿ ಮರುಗುವಂತೆ ಕಾಣುತ್ತಿವೆ ಇವನಿಗೆ. ಅವನ ಅಳಲು ಎಷ್ಟೆಂದು ಅಳೆಯುವುದಕ್ಕಾದೀತೆ? "ನಾನೊಬ್ಬನೇ ಹೆಣವನ್ನು ಮೆಲಕ್ಕೆ ತರಲಾರೆ. ಹಾಗೆ ಪ್ರಯತ್ನಿಸಿದರೆ ನನಗೂ ತಂದೆಯೊಂದಿಗೇ ಜೋಳದಲ್ಲೇ ಸಮಾಧಿಯಾದೀತು. ಜನಗಳನ್ನು ಕರೆತಂದೆನೋ ಪೋಲೀಸು, ಮಹಜರು, ಕೋರ್ಟು, ಕಛೇರಿ! ಸತ್ಯ........ಧರ್ಮ........" ಇದೇ ನಿಟ್ಟಿನಲ್ಲಿ ಜಾವ ಹೊತ್ತು ಚಿಂತಿಸಿದ. ಹಗೇವನ್ನು ಎಷ್ಟು ಹುರುಪಿನಿಂದ ಎಷ್ಟು ತ್ವರೆಯಿಂದ ತೆಗೆದನೋ, ಅಷ್ಟೇ ದುಗುಡದಿಂದ, ಅಷ್ಟೇ ತ್ವರೆಯಿಂದ ಮುಚ್ಚಿದ. ತನ್ನ ಮನಸ್ಸಿನ ಹಗೇವನ್ನೂ ಭದ್ರವಾಗಿ ಮುಚ್ಚಿದ. ನಾಳೆ ಊರಿಂದ ಬರುವ ಅಮ್ಮನಿಗೆ ಹೇಗೆ ಮುಖ ತೋರಿಸಬೇಕೆಂಬುದು ಬೇರೆ ಸಮಸ್ಯೆ! ಮನೆಯ ಕಡೆಗೆ ಹೋಗುವ ಧೈರ್ಯ ಬರಲಿಲ್ಲ. ಎತ್ತ ಹೊರಟನೋ ಬದುಕಿದ್ದಾನೋ ಸತ್ತನೋ ಒಬ್ಬರಿಗೂ ಗೊತ್ತಿಲ್ಲ

# ಕೆಂಚ ಶಿವುಗರು

ಬೆಳ್ಳಿ ಮೂಡುವ ಮುನ್ನವೇ ಹೊಲ ಹರಗಲು ಹೋಗಿದ್ದವರಿಗೆ ಊಟಕ್ಕೆ ಒಯ್ಯುವ ಕೆಲಸ ಶಿವುಗನ ಪಾಲಿಗೆ ಬಂದಿತ್ತು. ಶಾಲೆಗೆ ಸೊನ್ನೆ ಸುತ್ತಿ ಆನಂದದಿಂದ ಹೊಲಕ್ಕೆ ಹೋದ. ಕಡಲೆ, ಗೋಧಿ ಬಿತ್ತುವುದಕ್ಕೆ ಹೊಲವನ್ನು ಪಾಕಮಾಡುವ ಕಾಲ ಅದು. ಜೋಳಕ್ಕೆ ಎಳೆಹರೆಯ ಬಂದಿರುತ್ತದೆ; ಆಗ ತಾನೆ ಹೊಡೆದುಂಬುವುದಕ್ಕೆ ಅಣಿಯಾಗಿರುತ್ತದೆ. ಹಸಿರು ಜೋಳದ ನಡುವೆ ಅಲ್ಲಲ್ಲಿ ಕರಿಮಣಿಯ ಬಣ್ಣದ 'ಮಾಗಿ' ಗಳು. ನೆಲಸೂಸಲಂತಿದ್ದು ಕಾಲಿಗೆ ಒತ್ತುವುದಿಲ್ಲ. ಅಂತಹ ನೆತ್ತಿಯ ನೆಲದ ಮೇಲೆ ಓಡಾಡುತ್ತ ಜೋಳದ ಗರಿಯ ಪೀಪಿ ಊದುವ ಅವಕಾಶ ಸಿಕ್ಕಿದಾಗ ಶಿವುಗನ ಓರಗೆಯವರು ಯಾರು ತಾನೇ 'ಜೈಲು ಶಾಲೆ' ಗೆ ಹೋಗುತ್ತಾರೆ?

ಇವನು ಹೋದಾಗ ಹುದುಕಾರರ ಮನೆಯ ಊಟವಿನ್ನೂ ಬಂದಿರಲಿಲ್ಲ. ಹೊಲದ ಇನ್ನೊಂದು ಮುಂಡಿಯಲ್ಲಿದ್ದ ಬೇಸಾಯ ಇವನ ಕಣ್ಣಿಗೆ ಬಿತ್ತು. 'ಚಾ, ಮಕ್ಕಣ್ಣ, ಹಾಲ' ಎಂಬ ದನಿಯೂ ಕಿವಿಗೆ ಬಿತ್ತು. ಎತ್ತುಗಳು ಒಳ್ಳೇ ಬಿಗಿಯಿಂದ ಕಾಲುಕಿತ್ತು ಕಾಲಿಡುತ್ತಿವೆ. ಬೇಸಾಯ ತಿರುಗಿ ಇವನಿರುವ ಮುಂಡಿಗೆ ಬರುವವರೆಗೂ ಇವನು ಏನು ಮಾಡಬೇಕು? ಅದಕ್ಕೇ ಮಗ್ಗಲು ಹೊಲದ ಜೋಳಕ್ಕೆ ನುಗ್ಗಿದ್ದ.

ಬೇಸಾಯವೂ ಈ ತುದಿಗೆ ಬಂತು, ಹೆಣ್ಣುಮಗಳೊಬ್ಬಳು ಅನ್ನದ ಹೆಡಗೆಯನ್ನು ಹೊತ್ತುಕೊಂಡು ಹೊಲದೊಳಗೆ ಕಾಲಿಟ್ಟಳು. ಮುದ್ದುಮಗ ಕೆಂಚನನ್ನು ಅವಳ ಎಡಗೈ ಎಳೆದುಕೊಂಡು ಬರುತ್ತಿತ್ತು. ಶಿವುಗನ ತಂದೆ ಆ ತಾಯನ್ನು ನೋಡಿದವನು—

"ನಮ್ಮನೆಯೋರೇನು ಅವ್ವ ತಾನೇ ಅಟ್ಟು ತುಂಬಿ ಕಳಿಸ್ತಿದ್ದಾರು. ನೀನಾದರೂ ಹೋಗಿ ಹೆಡೆಗೆ ತುಂಬಿಸಿ ಶಿವುಗನ ವ್ಯಾಲೆ ಹೊರಸಿಕೊಂಬರಬೇಕಾಗಿತ್ತು" ಎಂದ. ಶಿವುಗ ಇವರ ಕಣ್ಣಿಗೆ ಬಿದ್ದಿರಲಿಲ್ಲ.

ಆ ತಾಯಿ—ನನಗಿಂತ ಮುಂದೆ ಒಂದು ಹೆಡಗೆ ಬರುತ್ತಾ ಇತ್ತು. ಶಿವುಗನೇ ಏನೋ ಅಂದುಕೊಂಡೆ.......

"ಪೀ………ಪಿ. ಪಿ. ಪೀ" ಶಿವುಗನ ಗೀತವದು

ಶಿವುಗನ ತಂದೆ—"ಲೇ, ಯಾರಲಾ ಅವನು ಜ್ವಾಳದ ಹೊಲದಾಗೆ?" ಎಂದು ಕೂಗಿದ.

"ಪಿ………ಪಿ. ಪಿ. ಪೀ………ಪಿ." ಕೂಗಿದ್ದಕ್ಕೆ ಉತ್ತರ.

"ಯಾರೋ ಅವನು? ಕಾಳರಟ್ಟು (ಕ್ಲಾರಿಯೋನೆಟ್) ಬಾರಿಸೋನು?"

"ನಾನು ನಾನೂ………ಪಿ. ಪೀ"

ಎಲ್ಲರೂ ನಕ್ಕರು. ಶಿವುಗ ಜೋಳದಿಂದ ಹೊರಗೆ ಬಂದ. ಊಟದ ಹೆಡಗೆ ತಲೆಯ ಮೇಲಿತ್ತು. ಕೆಂಚನ ತಂದೆ "ಇಲ್ಲೇ ಇಟ್ಟಿರ್ರಿ. ಇನ್ನೊಂದು ಶಿರ ಹೊಡಕೊಂಡು ಬರ್‍ತೇವೆ" ಎನ್ನುತ್ತ 'ಚಾ. ಬಸವ' ಎಂದು ಕೂಗಿ ಮೇಣಿ ಹಿಡಿದು ಎತ್ತುಗಳ ಮ್ಯೆಮೇಲೆ ಬಾರುಕೋಲು ಆಡಿಸಿದ. ಬೇಸಾಯ ಮುಂದುವರಿಯಿತು.

ಕೆಂಚನ ತಾಯಿ ಶಿವುಗನನ್ನು ಕರೆದು "ಶಿವೂ ಇವನನ್ನೂ ಕರಕೊಂಡು ಆಟ ಆಡ್ತಾ ಇರಪ್ಪ, ನಾನು ಅಣ್ಣಾ ಅವರಿಗೆ ಊಟಕ್ಕೆ ಅಣಿಮಾಡ್ತೀನಿ" ಎಂದದ್ದೇ ತಡ, ಶಿವುಗ ಕೆಂಚನ ಬಳಿಗೆ ಓಡಿಹೋಗಿ ತನ್ನ ಶಕ್ತಿಯನ್ನೆಲ್ಲಾ ಕ್ರೋಢೀಕರಿಸಿ ಅವನನ್ನು ಎತ್ತಿಕೊಂಡ. "ನಿನ್ಹೆಸರೇನಪ್ಪ" ಎನ್ನುತ್ತ ಒಂದು ಬಾರಿ ಮುತ್ತಿಟ್ಟ. ಕೆಂಚ ಕಿಲಕಿಲ ನಕ್ಕು ತನ್ನ ಪುಟ್ಟ ಕೈಗಳನ್ನು ಶಿವೂನ ಗಲ್ಲದ ಮೇಲೆ ಆಡಿಸುತ್ತ "ನನ್ನೆತರು ಕೆಂತ" ಎಂದ. ಇನ್ನೂ ಮಾತು ಬರುತ್ತಿರಲಿಲ್ಲ, ತನ್ನ ನಗುವಿನಿಂದಲೇ ತೋರಿಸಿದ ತನ್ನ ಪ್ರೀತಿಯನ್ನ. ಅವನ ತಂದೆ ಜಾತ್ರೆಯಿಂದ ಅವನಿಗಾಗಿ ತಂದಿದ್ದ 'ಸಿಳ್ ಗುಬ್ಬಿ' ಯನ್ನು ಕಿಸೆಯಿಂದ ಹೊರತೆಗೆದು ಒಂದುಬಾರಿ ಊದಿ "ಊಂ" ಎನ್ನುತ್ತ ಕೈಚಾಚಿ ಆ 'ಸಿಳ್ ಗುಬ್ಬಿ' ಯನ್ನು ಶಿವುಗನಿಗೆ ಕೊಡಹೋದ. ಶಿವುಗ ಅದನ್ನು ಇಸಿದುಕೊಂಡು ಊದಿ ಕೆಂಚನನ್ನು ಕೆಳಗಿಳುಹಿ ಅಲ್ಲಿಯೇ ಹತ್ತಿರ ಇದ್ದ ಜೋಳದ ಹೊಲಕ್ಕೆ ಹೋಗಿ ಗರಿಯನ್ನು ಕಿತ್ತು 'ಪೀಪಿ' ಮಾಡಿ ಊದಿ ಅದೇ ಪೀಪಿಯನ್ನು ಕೆಂಚಣ್ಣನ ಬಾಯಲ್ಲಿಟ್ಟು, ಊದಲೆಂದು. ಕೆಂಚ ತನ್ನ ಉಸಿರನ್ನೆಲ್ಲಾ ವ್ಯಯ ಮಾಡಿದರೂ ಶಬ್ದ ಹೊರಡಲಿಲ್ಲ ಮಾತ್ರವಲ್ಲ, ಪೀಪಿಯೂ ಕೆಟ್ಟುಹೋಗಿ ಗರಿಯಾಗಿ ಕೆಳಗುರುಳಿತು. ಕೆಂಚನ ಮುಖ ಇನ್ನೂ ಕೆಂಚಗಾಯಿತು. ಕಣ್ಣಿನಲ್ಲಿ ನೀರು ಇಣಕಿ ನೋಡುತ್ತಿತ್ತು. ಶಿವುಗ ಮತ್ತೊಂದು ಗರಿಯನ್ನು ತಂದು

'ಪೀಪಿ' ಮಾಡಿ ಅವನ ಬಾಯಲ್ಲೇ ಇಟ್ಟು ಊದಿಸಿದ. ನಾದ ಬಂತು; ಇಣಿಕಿ ನೋಡುತ್ತಿದ್ದ ಕಣ್ಣೀರು ಆನಂದಭಾಷ್ಪವಾಗಿ ಹಾಲುಗೆನ್ನೆಯ ಮೇಲೆ ಉರುಳಿ ಎರೆಯ ಮಣ್ಣಿನಲ್ಲಿ ಮಾಯವಾಯಿತು. ಇವರ ಆಟ ಮುಗಿಯುವುದರೊಳಗೆ ಬೇಸಾಯದವರ ಊಟ ಮುಗಿಯಿತು. ಕೆಂಚನೂ ಶಿವುಗನೂ ಮನೆಯ ದಾರಿ ಹಿಡಿದರು ಕೆಂಚನ ಅಮ್ಮನೊಂದಿಗೆ.

ಕೆಂಚನೂ ಸರಸ್ವತಿ ಪೂಜೆ ಮಾಡಿ ಶಾಲೆಗೆ ಸೇರಿದ. ಅವನನ್ನು ಕರೆದು ಕೊಂಡು ಹೋಗುವುದು, ಮನೆಗೆ ತಂದು ಬಿಡುವುದು ಶಿವುಗನ ಪಾಲಿಗೆ ಬಂತು. ಸ್ಕೂಲಿಗೆ ಹೋದರೆ ಸಾಕು ಎಂದು ಕೆಂಚನಿಗೆ ಅವರಮ್ಮ ಸಲ್ಲಿಸುತ್ತಿದ್ದ ಲಂಚ (ತಿನಿ) ದಲ್ಲಿ ಅರ್ಧ ಶಿವುಗನಿಗೆ ಸಲ್ಲುತ್ತಿತ್ತು. ಶಿವುಗನದು ಎರಡನೇ ತರಗತಿ ಕೆಂಚ ಇನ್ನೂ ಮೊದಲನೇ ತರಗತಿ. ಕೆಂಚನು ಬೇರೆ ಯಾರಾರೋ ಹುಡುಗರ ಜೊತೆಗೆ ಕುಳಿತುಕೊಳ್ಳುವುದು ಶಿವುಗನಿಗೆ ಹಿಡಿಸಲಿಲ್ಲ. ಒಂದುದಿನ ಉಪಾಧ್ಯಾಯರನ್ನು ಕೇಳಿಯೇಬಿಟ್ಟ, "ಸಾರ್ ನಾನು ಒಂದನೇ ಕ್ಲಾಸಿಗೇ ಹೋಗಿ ಬಿಡುತ್ತೇನೆ."

ಉಪಾಧ್ಯಾಯರು—ಯಾಕೋ ಶಿವ?

ಶಿವುಗ—ಯಾಕೂ ಇಲ್ಲ.

ಉಪಾ—ಅಂದರೆ?

ಶಿವುಗ—ನನಗೆ ಎರಡನೇ ಕ್ಲಾಸಿನ ಪಾಠ ಲೆಕ್ಕ ಸರಿಯಾಗಿ ಬರೋದಿಲ್ಲ, ಅದಕ್ಕೇ ಮೊದಲಿನಿಂದ ಕಲಿಯೋಣಾಂತ.

ಉಪಾ—ನಿನಗೆ ಬರೋದಿಲ್ಲಾಂತ ಯಾರು ಹೇಳಿದರು?

ಶಿವುಗನಿಗೆ ಉತ್ತರ ಹೇಳಲು ನಾಚಿಕೆಯಾಯಿತು. ತಲೆ ತಗ್ಗಿಸಿದ. "ನಾನೇ" ಎಂದ.

ಮೇಷ್ಟರಿಗೂ ಅನುಮಾನ ಬಂದು ಶಿವುಗನನ್ನು ಇನ್ನೊಂದು ಬಾರಿ ಪರೀಕ್ಷೆ ಮಾಡಿದರು. 'ಉಕ್ತಲೇಖನ' ದಲ್ಲಿ ಒಂದು ತಪ್ಪೂ ಇರಲಿಲ್ಲ. ಹಾಕಿಸಿದ್ದ ಲೆಕ್ಕಗಳೆಲ್ಲವನ್ನೂ 'ಸರಿ' ಮಾಡಿದ್ದ. ಆದ್ದರಿಂದ ಓಚಯ್ಯನವರು "ಇಲ್ಲ, ನಿನಗೆ ಪಾಠ ಲೆಕ್ಕ ಎಲ್ಲಾ ಸರಿಯಾಗಿ ಬರುತ್ತದೆ. ಎರಡನೇ ಕ್ಲಾಸಿನಲ್ಲೇ ಇರು" ಎಂದರು. ಶಿವುಗ ಅಯ್ಯೋ 'ತಪ್ಪು' ಮಾಡಬೇಕಾಗಿತ್ತು

ಎಂದುಕೊಂಡ. ಮನಸ್ಸಿಲ್ಲದ ಮನಸ್ಸಿನಿಂದ ಇದ್ದಲ್ಲಿ ಇರಬೇಕಾಯಿತು. ಆದರೂ ತೆರವಾದಾಗಲೆಲ್ಲಾ ಕೆಂಚನೆಡೆಗೆ ಹೋಗಿ ಆಟವಾಡುತ್ತಲೋ ಬಳಪ ಗೆಲ್ಲುತ್ತಲೋ ಎರಡೂ ಬೇಡವಾದಾಗ ಕೆಂಚನಿಗೆ ಪಾಠ ಹೇಳಿಕೊಡುತ್ತಲೋ ಕಾಲ ಕಳೆಯುತ್ತಿದ್ದ. ಅದೇಕೋ ಆ ವರ್ಷ ಫೇಲಾಗಿ ಬಿಟ್ಟು ಎರಡನೇ ತರಗತಿಯಲ್ಲೇ ಉಳಿದ. ಕೆಂಚ ಎರಡನೇ ತರಗತಿಗೆ ಏರಿದ.

ಆ ಕೇರಿಯ ಬಾಲಕರ ಗುಂಪಿಗೆ ಶಿವುಗ ಕೆಂಚರೇ ಮುಂದಾಳುಗಳು. ಯಾವ ಆಟವಾದರೂ ಇವರಿಲ್ಲದೆ ನಡೆಯುತ್ತಿರಲಿಲ್ಲ. ಅವರಾಡುವ ದೇವರಾಟ ಬಲು ಚಂದ. ಮಣ್ಣಿನ ಕುದುರೆ ದೇವರು ಮಾಡಿ ಅದಕ್ಕೆ ಬೇಗಡೆ ಗುಂಡು, ಚಿಪ್ಪಿಗರ ಅಂಗಡಿಯಲ್ಲಿ ಸಿಗುವ ಬಣ್ಣ ಬಣ್ಣದ ಬಟ್ಟೆ, ಬಣ್ಣದ ಸೀರೆಯ ಅಂಚಿನ ಚೂರುಗಳು, ಕೆಂಪಿನ ವಸ್ತ್ರದ ಹರುಕು—ಇವುಗಳಿಂದ ಅಲಂಕಾರ ಮಾಡಿ ಜೀವಕಳೆ ತುಂಬಿ 'ಅಪ್ಪಣೆ' ಕೇಳುವರು. ದೇವರನ್ನು ಹೊರುವುದು ಯಾವಾಗಲೂ ಕೆಂಚನೇ. ಇನ್ನುಳಿದವರೆಲ್ಲರೂ ಓಲಗದವರು, ಹಿಲಾಲಿನವರು, ಹಲಗೆಯವರು ಆಗಿ ಊಳಿಗಮಾಡುತ್ತ ಹೋಗಬೇಕು. ಶಿವುಗ ದೇವರನ್ನು ಅಪ್ಪಣೆ ಕೇಳುವವನು—ಕುರಿತಪ್ಪಣೆಯನ್ನು. ಯಾವ ಹುಡುಗನು ಅಪ್ಪಣೆ ಕೇಳಬೇಕಾದರೂ ಶಿವುಗನ ಮುಖಾಂತರ ಕೇಳಬೇಕು. ದೇವರು ಕುರಿತಸ್ಥಳವನ್ನು ತೋರಿಸಿದೊಡನೆ ಶಿವುಗ 'ಅಪ್ಪಣೆ' ಕೇಳಿದವನನ್ನು ಕುರಿತು "ಎಲ್ಲೈ ಬೆಸಗೊಂಬಾತನೇ ಕೇಳು" ಎನ್ನುತ್ತ ಫಲಿತಾಂಶವನ್ನು ತಿಳಿಸುವನು. ಕೆಂಚನಿಗೆ ದೇವರನ್ನು ಹೊರುವ ಗೌರವವನ್ನು ದೊರಕಿಸಿ ಕೊಟ್ಟುದಕ್ಕಾಗಿ ಬಂಡಿ ಆಡುವಾಗ ಕೆಂಚನ ಸರದಿಯಲ್ಲಿಯೂ ಶಿವುಗನೇ ಬಂಡಿ ಹತ್ತುತ್ತಿದ್ದ ಕೆಂಚ ಶಿವುಗರೇ ಸಾಧಾರಣವಾಗಿ ಯಾವಾಗಲೂ 'ಬೊಡ್ಡೆ ಎತ್ತು' ಗಳಾಗುತ್ತಿದ್ದರು.

ಗೋಲಿ, ಚಿಣ್ಣಿಕೋಲು, ಕೊಕ್ಕ ಮುಂತಾದ ಆಟಗಳಲ್ಲಿ ಮಾತ್ರ ಕೆಂಚ ಶಿವುಗ ಎಂದರೆ ಪೂರ್ವ, ಪಶ್ಚಿಮ ; ಹಾವು ಮುಂಗುಸಿ. ಒಂದುಸಾರಿ 'ಗೋಲಿ ಗೆಲ್ಲಪ್ಪ' ನನ್ನು ಆಡುವಾಗ ಶಿವು ಕಾಣ್ತಾ ಕಾಣ್ತಾ ಅನ್ಯಾಯ (ಅವರ ಭಾಷೆಯಲ್ಲಿ ಅನ್ನೇ ದುಕ್ಲಿ) ದಿಂದ ಆಡಿದ, ಅದರಿಂದ ಕೆಂಚ ಎರಡು ಗೋಲಿಗಳನ್ನು ಸೋತ. ಶಿವುಗ "ಸೋಲ ಕೊಟ್ಟು ಬಿಡು" ಎಂದದ್ದಕ್ಕೆ ಕೆಂಚನಿಗೆ ರೇಗಿತು, ನಿಮ್ಮಪ್ಪನ ಮನೇದಲ್ಲ ಎಂದು ಕಣ್ಣು ಕೆಂಪಗೆ ಮಾಡಿದ. ಶಿವುಗನಿಗೂ ರೇಗಿತು

ಕೊಟ್ಟ ಒಂದೇಟು—ಕೆನ್ನೆಗೆ, ಸರಿ ಗುದ್ದಾಟ ಶುರುವಾಯಿತು. ಮನೆಯವರು ಬಂದು ಇಬ್ಬರಿಗೂ ಬೈದು ಜಗಳವನ್ನು ಕೊನೆಗಾಣಿಸಿದರು. ಕಡೆಗೂ ಕೆಂಚ ಸೋಲನ್ನೊಪ್ಪಿಕೊಳ್ಳಲೇ ಇಲ್ಲ. ಮರುದಿನ ಬೆಳಗ್ಗೆ ಶಿವುಗನೋ ಅವನ ಕಾಲು ಗಳೋ ಹೋಗಿ ಕೆಂಚನನ್ನು ಶಾಲೆಗೆ ಕರೆದುಕೊಂಡು ಹೋದುದಾಯಿತು.

ಶಿವುಗ ಸ್ವಲ್ಪ ಒರಟ. ಚೆನ್ನಾಗಿ ಬೆಳೆದುಕೊಂಡು ಕೊಬ್ಬಿದ ಕರುವಿನಂತಿದ್ದ. ಕೆಂಚ ನೋಡುವುದಕ್ಕೆ ಚೆನ್ನಿಗನಾಗಿದ್ದರೂ ತೆಳ್ಳಗೆ ಬೆಳ್ಳಗಿದ್ದ. ಜೊತೆಗೆ ಕೋಮಲ ಪ್ರಕೃತಿಯವನು. ದನಿಯೂ ಇಂಪಾಗಿತ್ತು; ಒರಟರ ಮಲ್ಲ ಶಿವುಗನ ದನಿಯಂತೆ ಕರ್ಕಶವಾಗಿರಲಿಲ್ಲ. ಶಿವು ಎಲ್ಲರನ್ನೂ ಹೆದರಿಸಿ ಬೆದರಿಸಿ ತಾನೇ ಕ್ಲಾಸಿನಲ್ಲಿ ಮೊದಲನೆಯವನಾಗಿ ಕುಳಿತುಕೊಳ್ಳುತ್ತಿದ್ದ. ಕೆಂಚನಿಗೆ ಅದು ಸಹಿಸದು. ತಾನೂ ಎಲ್ಲ ಹುಡುಗರಿಗಿಂತ ಮೇಲೆ ಕುಳಿತು ಕೊಳ್ಳುವುದಕ್ಕೆ ಯಾವಾಗಲೂ ಹವಣಿಸುವನು. ಶಾಲೆಯಲ್ಲಿ ಪಾಠ ಓದು ವಾಗ ಕ್ಲಾಸಿನ ಎಲ್ಲಾ ಹುಡುಗರೂ ಎದ್ದು ನಿಲ್ಲಬೇಕು. ಮೇಷ್ಟರು "ಊ, ಪಾಠ ಓದ್ರ್ಯೋ." ಎಂದು ಕೂಗಿದಾಗ ಕೆಳಗಡೆ—ಹುಡುಗರ ಮಧ್ಯೆ ಇದ್ದ ಕೆಂಚ ಓಡಿಹೋಗಿ ಶಿವುಗನಿಗಿಂತ ಮೇಲೆ ನಿಂತು 'ಪಾಠ' ಓದಿ ಮುಗಿದ ಮೇಲೆ ಶಿವುಗ ಸ್ಥಳ ಕೊಡದಿದ್ದುದರಿಂದ ಬೆಂಚಿನ ಮೇಲೆ ಕುಳಿತುಕೊಳ್ಳುವುದರ ಬದಲು ನೆಲದ ಮೇಲೆಯೇ ಕುಳಿತುಕೊಳ್ಳುವನು. ಪಾಠ ಮುಗಿದ ಮೇಲೆ ತನ್ನ ಹಳೆಯ ಗೊತ್ತಿಗೇ ಬಂದು ಕುಳಿತುಕೊಳ್ಳುತ್ತಿದ್ದ. ಕೆಂಚ ಗಣಿತದಲ್ಲಿ ಬಹಳ ಬುದ್ಧಿ ವಂತನಾಗಿದ್ದರೂ 'ಕಾಪಿ' ಚೆನ್ನಾಗಿ ಬರೆಯುತ್ತಿರಲಿಲ್ಲ. ಶಿವುಗ ಚೆನ್ನಾಗಿ 'ಕಾಪಿ' ಬರೆದು ಮೇಷ್ಟರು ಅದನ್ನು ನೋಡಿ ಮೆಚ್ಚಿ ಹತ್ತು ನಂಬರು ಕೊಟ್ಟರೆ ಕೆಂಚನಿಗೆ ಸಮಾಧಾನವೇ ಇಲ್ಲ, ಉಪಾಧ್ಯಾಯರ ಮನೆಗೆ ಹೋಗಿ ಅತ್ತು ಕರೆದು ಹತ್ತೊವರೆ ನಂಬರು ಹಾಕಿಸಿಕೊಂಡು ಬರುವನು. ತಾನಾದರೆ ಶಿವುಗ ನಿಗೆ ಒಂದು ಲೆಕ್ಕವನ್ನೂ ತೋರಿಸುತ್ತಿರಲಿಲ್ಲ. ಅದೂ ಶಿವುಗನ 'ಗಣಿತ'ದ ಸಹಾಯದಿಂದಲೇ ಅವನು ಲೆಕ್ಕ ಮಾಡುತ್ತಿದ್ದುದು. ಅಂತೂ ಅವರಿಬ್ಬರಲ್ಲಿಯೂ ನಾನು ಹೆಚ್ಚು ಎನ್ನಿಸಕೊಳ್ಳಬೇಕು ನಾನು ಹೆಚ್ಚು ಎನ್ನಿಸಿಕೊಳ್ಳಬೇಕು ಎಂಬ ಆಕಾಂಕ್ಷೆ, ಹುರುಡು ಯಾವಾಗಲೂ ಎದ್ದು ಕಾಣುತ್ತಿತ್ತು. ಒಬ್ಬ ನನ್ನು ಕಂಡರೆ ಮತ್ತೊಬ್ಬನಿಗೆ ದ್ವೇಷವಾಗಲಿ ಅಸೂಯೆಯಾಗಲಿ ಇರಲಿಲ್ಲ; ಒಬ್ಬನ ಹೊಲದಲ್ಲಿ ಚೆನ್ನಾಗಿ ಬೆಳದಿರುವ ಹೆಬ್ಬೆಳೆಸನ್ನು ಕಂಡು ಇನ್ನೊಬ್ಬನು

ಕರುಬಿ ಆ ಬೆಳಸಿಗೆ ದನಗಳನ್ನು ಬಿಟ್ಟು ಮೇಯಿಸಿ ಹಾಳುಮಾಡುತ್ತಿರಲಿಲ್ಲ; ತನ್ನ ಹೊಲವನ್ನೂ ಹಸನು ಮಾಡಿ ಹರಗಿ, ಕಸುವು ಮಾಡಿ ಹುಲುಸು ಬೆಳೆಯನ್ನು ತೆಗೆಯಬೇಕೆನ್ನುವ ಹೆಬ್ಬಯಕೆ, ಹುರುಪು ಮಾತ್ರ ಅವನಿಗೆ ಇರುತ್ತಿತ್ತು.

ಅವರಿಬ್ಬರನ್ನೂ ಮೇಲಿನ ತರಗತಿಗೆ ಏರಿಸಿದರು.

ಈಗ ಇನ್ನೊಬ್ಬ ಉಪಾಧ್ಯಾಯರು ಅವರ ಗುರುಗಳು. ಆ ತರಗತಿಯ ಹುಡುಗರೆಲ್ಲರೂ—ಕೆಂಚ ಶಿವುಗ ಸೇರಿ—ಈ ಉಪಾಧ್ಯಾಯರ ಗದೆಗೆ ಹೆದರ ಬೇಕಾಗಿ ಬಂತು, ಅವರಿಗಲ್ಲ. ಅನೇಕ ಬೆತ್ತಗಳನ್ನು ಮುರಿದುಹಾಕಿದರೂ ಹೊಸ ಬೆತ್ತಗಳು ಬರುತ್ತಲೇ ಇದ್ದುವು. ಒಂದು ಮಧ್ಯಾಹ್ನ ಬೆತ್ತಮುರಿದು ಹೊರಗೆಸೆದು ಬಿಟ್ಟಿದ್ದಾರೆ, ಮುರಿದೆಸೆದ ಮರುಗಳಿಗೆಯಲ್ಲಿಯೇ ಮೇಷ್ಟರು ಆಗಮಿಸಿದ್ದಾರೆ, ದಿನವೂ ಅಷ್ಟು ಗಲಾಟೆಮಾಡುತ್ತಿದ್ದವರು ಸ್ವಲ್ಪವೂ ಶಬ್ದ ಮಾಡದೆ ಕುಳಿತಿದ್ದಾರೆ. ಮೇಷ್ಟರು ಮೂಲೆ ಮೂಲೆಯಲ್ಲಿ ತಡಕಿದರು, ಸ್ಕೂಲಿನ ಸೂರಿನಲ್ಲಿ ತೊಲೆಯ ಮೇಲೆ ಎಲ್ಲೆಲ್ಲಿಯೋ ಹುಡುಕಿದರು ಬೆತ್ತ ಸಿಗ ಲಿಲ್ಲ. ಬೆತ್ತವನ್ನು ಹೊರಗೆಸೆದಿದ್ದಾರೆಂದು ಗೊತ್ತಾಯಿತು. ಓಚಯ್ಯನವರ ಕಣ್ಣು ಕೆಂಪಗಾದುವು. ಶಿವುಗನಿಗೆ ಆಗಲೇ ಗೊತ್ತಾಯಿತು. ಮೇಷ್ಟರು ಕುದುರೆ ಏರಿದ್ದಾರೆಂಬುದು—"ಕೆಂಚ, ಒಂದು ಬೆರಳು ತೋರಿಸಿ ಹೊರಗೆ ಹೋಗೋ" ಎಂದ. ಕೆಂಚ ಪರಾರಿಯಾದ. ಓಚಯ್ಯನವರು ಗಾಂಭೀರ್ಯ, ಕ್ರೋಧ, ವೈರಗಳು ಸೇರಿಕೊಂಡಂತಿದ್ದ ದನಿಯಿಂದ "ಯಾವನೋ ಬೆತ್ತ ಮುರಿದವನು? ಹೇಳುತ್ತೀರೋ ಇಲ್ಲವೋ" ಎನ್ನುತ್ತ ಕುರ್ಚಿಯಿಂದ ಮೇಲ ಕ್ಕೆದ್ದು ಮುಷ್ಟಿಗೈ ಮಾಡಿಕೊಂಡು ಅವುಡುಗಚ್ಚಿಕೊಂಡು ಹುಡುಗರ ಮೇಲೆ ಬೀಳುವುದಕ್ಕೆ ಸಿದ್ಧರಾದರು. ಆ ಕೂಡಲೇ ಶಿವುಗ "ಕೆಂಚ ಮುರಿದ ಸಾರ್" ಎಂದು ಹೇಳಿದ. ಕೆಂಚ ಮನೆಗೆ ಓಡಿದ್ದ. ಮೇಷ್ಟ್ರು ಸಿಟ್ಟನ್ನೂ ಉಗುಳನ್ನೂ ನುಂಗಿಕೊಂಡು ಕುರ್ಚಿಯ ಮೇಲೆ ಕುಳಿತರು—ಕಸಕ್ಕನೆ.

ಆ ಓಚಯ್ಯನವರು ಹುಡುಗರ ಪಾಲಿಗೆ ಯಮಕಿಂಕರನಂತೆಯೇ ಇದ್ದರು. ಬೆತ್ತವಿಲ್ಲದಿದ್ದರೆ ಉಪಾಧ್ಯಾಯರು ಅಪೂರ್ಣರು ಅಶಕ್ತರು ಎಂದೇ ಆ ಮುಜಯ್ಯ ಮೇಷ್ಟರ ಭಾವನೆ. ಕರ್ಣನು ಕುಂಡಲಕವಚಗಳೊಂದಿಗೆ ಹುಟ್ಟಿ ದಂತೆ ಈ ಮುಂಜಯ್ಯ ಮೇಷ್ಟರೊಬ್ಬರು ಆಗರ್ಭ 'ಗದಾಧಾರಿ' ಗಳೆಂದೂ

ಕಾಣುತ್ತದೆ. ಆ ತರಗತಿಯ ನಾಯಕನೂ ಉಪನಾಯಕನೂ-ಓಜಯ್ಯನನ್ನು ದಾರಿಗೆ ತರುವುದಕ್ಕೆ ಏನೇನೋ ಹಂಚಿಕೆ ಹಾಕಿದರು. "ಕುರ್ಚಿಯ ಮೇಲೆ ಮುಳ್ಳಿಟ್ಟರೆ?" "ಪಾಪ! ಚುಚ್ಚಿ ಬಿಟ್ಟು ಗಾಯವಾಗಿ ಬಿಡುತ್ತದೆ. ಆ ಗೋಳು ನೋಡುವವರಾರು," "ಸಿಂಹಾಸನದ ಮೇಲೆ ನಸ್ಯ ನ್ನಿ ಪುಡಿ ಚೆಲ್ಲಿದರೆ?" ಛೀ ಬೇಡ, ನಮ್ಮನ್ನೂ ಆಮೇಲೆ ಮನೆಗೂ ಸೇರಿಸುವುದಿಲ್ಲ." ಕುರ್ಚಿಗೆಲ್ಲಾ ಗೊಂದು ಬಳಿದರೆ?" ಥೂ, ಅದು ಚೆನ್ನಾಗಿಲ್ಲ, ಒಂದಲ್ಲ ಒಂದು ರೀತಿಯಿಂದ ನಮಗೂ ಕೆಟ್ಟದಾಗುತ್ತದೆ." ಹೀಗೆಯೇ ಏನೇನೋ ಆಲೋಚನೆ ಮಾಡಿದರು; ಒಂದೂ ಬಗೆಹರಿಯಲಿಲ್ಲ. ಹಗಲಿರುಳೂ ಅವರಿಗೆ ಅದೇ ಯೋಚನೆ. ಕೊನೆಗೆ ಭಾವನಾ ಜೀವಿಯಾದ ಶಿವೂಗೆ ಒಂದು ದಾರಿ ಹೊಳೆಯಿತು—ಓಡಿದ ಕೆಂಚನೆಡೆಗೆ.

"ಕೆಂಚ, ಆ ಬೆತ್ತಮುರುಕ ಮೇಷ್ಟರನ್ನು ದಾರಿಗೆ ತರೋದಕ್ಕೆ 'ಒಂದುಪಾಯ' ಹುಡುಕಿದ್ದೇನೆ ಕಣೋ" ಅಂದ.

"ಅದೇನಪ್ಪ ಅಂಥದು?"

"ಆ 'ಧ್ರುವ ಚರಿತ್ರೆ' ಅವರೇ ಹೇಳಿಕೊಟ್ಟಿದ್ದು!"

"ಏನು? ಹೇಳಿ ಕೊಟ್ಟರು?"

"ನಾವೂ ಧ್ರುವನಂತೆ ತಪಸ್ಸು ಮಾಡೋಣವೋ."

"ಏಕೆ?"

"ಮಂಜಯ್ಯ ಮೇಷ್ಟರನ್ನು ದಾರಿಗೆ ತರುವುದಕ್ಕೆ."

"ಹೇಗೆ ತರೋದು?'

"ಅಯ್ಯೋ ಬೆಪ್ಪೆ, ದೇವರು ಒಲಿಯುತ್ತೆ, ಏನು ಬೇಕು ಅಂತಾ ಕೇಳುತ್ತೆ ಮಂಜಯ್ಯ ಮೇಷ್ಟ್ರು ನಮ್ಮನ್ನೆಲ್ಲಾ ಹೊಡೆಯದಂತೆ ನೋಡಿಕೋ ಅನ್ನೋದು, ಗೊತ್ತಾಗಲಿಲ್ವೇನೋ" ಶಿವುಗನೆಂದ ಒಳ್ಳೇ ಸರ್ವಜ್ಞನಂತೆ.

"ಬಿಡೋ ಯಾರಾದರೂ ಕೇಳಿದವರು ನಕ್ಕು ಬಿಡುತ್ತಾರೆ, ಅದೂ ನಾವು ಯಾರನ್ನು ಕುರಿತು ತಪಸ್ಸು ಮಾಡಬೇಕು." ಎಂದ ಕೆಂಚನಿಗೆ ಶಿವುಗ "ನಮ್ಮ ಹೊಲದ ಹತ್ತರ ಇರೋ ಹಾರೋ ಹಳ್ಳದ ಚೌಡವ್ವನ 'ಗುಡಿಗೆ' ಹೋಗೋಣ. ಯಾರೂ ನೋಡುವುದೂ ಇಲ್ಲ ಬೇವಿನ ಮರದ ತಣ್ಣೆಳಲು, ಹತ್ತಿರವೇ ಹಳ್ಳ." ಎಂದ.

'ಚೌಡಿ' ಅಂದರೆ ಸುಣ್ಣ ಬಳಿದುಕೊಂಡ ಒಂದು ಗುಂಡುಕಲ್ಲು. ಚೌಡವ್ವನ 'ಗುಡಿ' ಎಂದರೆ ಆ ಬೇವಿನ ಮರದ ಪೊಟ್ಟರೆ. ಸರಿ, ಮಧ್ಯಾಹ್ನದ ಶಾಲೆಗೆ ಸೊನ್ನೆ ಸುತ್ತಿ ಇಬ್ಬರೂ ಹೊರಟರು. ಹಳ್ಳಕ್ಕೆ ಹೋಗಿ ಕೈಕಾಲು ಮುಖ ತೊಳೆದುಕೊಂಡು ಬಂದು ಚೌಡಿಯ 'ಗುಡಿಗೆ' ಬಂದರು. 'ಗುಡಿ'ಯ ಎದುರಿನ 'ಅಂಗಳ' ವನ್ನೆಲ್ಲಾ ಗುಡಿಸಿ ಮುಳ್ಳು ಮಸಿಯನ್ನು ಕಿತ್ತೆಸೆದು ಕುಳಿತರು ಚಕ್ಕಬಕ್ಕಲು ಹಾಕಿಕೊಂಡು. ಶಿವುಗ ಅವರ ಮನೆಯಲ್ಲಿ ಹಬ್ಬ ಹುಣ್ಣಿಮೆಗಳಲ್ಲಿ ಮಾತ್ರ ಹೊರಗೆ ತೆಗೆಯುತ್ತಿದ್ದ ಕೆಂಪು ಬಣ್ಣದ ಹೂವಿನ ವಸ್ತ್ರವನ್ನು ಮುಖಕ್ಕೆ ಮುಚ್ಚಿಕೊಂಡು ಚೌಡಿಯನ್ನು ಕುರಿತು ತಪಸ್ಸು ಮಾಡತೊಡಗಿದ. ಕೆಂಚ, "ಏ ಶಿವಣ್ಣಾ, ನನಗೂ ಬಣ್ಣದ ವಸ್ತ್ರ ಇಲ್ಲವಲ್ಲೋ" ಎಂದ.

"ಏ, ಸುಮ್ಮನೆ ಕಣ್ಣು ಮುಚ್ಚಿಕೊಂಡು ತಪಸ್ಸು ಮಾಡೋ" ಎಂದ ಶಿವು ಮಹಾ ತಪಸ್ಸು ಒಂದೆರಡು ನಿಮಿಷ ನಡೆಯಿತು. ಕೆಂಚ ಕಿಸಕ್ಕನೆ ನಕ್ಕು "ಶಿವಣ್ಣಾ, ಚೌಡವ್ವನ ಪೂಜೆ ಮಾಡಲೇ ಇಲ್ಲವಲ್ಲೋ" ಎಂದ.

"ಹೂ ಹೌದು ಕಣೋ, ನೀರಿಲ್ಲ, ವಿಭೂತಿಯಿಲ್ಲ, ಗಂಧ, ಧೂಪ, ದೀಪ ಕುಂಕುಮ, ಬುಕ್ಕಿಹಿಟ್ಟು ಇವನ್ನೆಲ್ಲಾ ಎಲ್ಲಿಂದ ತರಬೇಕು. ಒಂದಿಷ್ಟು ತವರೆ ಹೂವು ಎಕ್ಕೆ ಹೂವು ತಗೊಂಡು ಬಾರೊ."

ಕೆಂಚ ಸ್ನಾನ ಮಾಡೀರೋ ಜ್ಞಾನ ತೀರ್ಥದಲಿ ಎಂದುಕೊಳ್ಳುತ್ತ ಓಡಿಹೋಗಿ ಒಂದು ತೆಕ್ಕೆ ಹೂ ತಂದ. ಆ ಹೂಗಳನ್ನೆಲ್ಲಾ ಮರದ ಬುಡದಲ್ಲಿ ಒಟ್ಟಿ ಮತ್ತೆ ಇಬ್ಬರೂ ಅಂತರ್ಮುಖಿಗಳಾದರು. ಎಷ್ಟು ಹೊತ್ತಾದರೂ ಚೌಡಿ ಬರಲೇ ಇಲ್ಲ. ಕೆಂಚನ ಸ್ವಭಾವವು ಸ್ವಲ್ಪ ಚಂಚಲ. "ಏ ಶಿವಣ್ಣಾ ಯಾರೋ ಬಂದ ಹಾಗೆ ಸಪ್ಪಳವಾಯ್ತು ಕಣೋ ಚೌಡವ್ವನೇ ಇರಬೇಕು" ಎಂದ–ಕಣ್ಣು ತೆರೆದುಕೊಂಡು. ಶಿವುಗನೂ ಕಣ್ಣಗಲಿಸಿಕೊಂಡು "ಎಲ್ಲಿ ?" ಎಂದ. ಎಲ್ಲೋ 'ಸರಕ್' ಅಂದಹಾಗಾಯ್ತು ಅದಕ್ಕೆ ಹಾಗಂದೆ ಎಂದ ಕೆಂಚ.

ಶಿವುಗ, "ಯಾರೂ ಇಲ್ಲ, ಸುಮ್ಮನೆ ಕಣ್ಣು ಮುಚ್ಚಿಕೊಂಡು ತಪಸ್ಸು ಮಾಡೋ. ಒಂದೇ ದಿನಕ್ಕೆ ಒಲಿದು ಬಿಡುತ್ತಾಳೇನೋ ಚೌಡವ್ವ ? ಧ್ರುವ ವರ್ಷಗಟ್ಟಲೇ ತಪಸ್ಸು ಮಾಡಲಿಲ್ಲವೇ" ಎಂದು ಬೈದು ಪುನಃ ಅಂತರ್ಮುಖಿಯಾದನು.

ಕೆಂಚನಿಗೆ ತಡೆಯಲಾರದಷ್ಟು ನಗು "ಹೂ, ಆಗಲಿ" ಎಂದು ಕಣ್ಣು ತೆರೆದುಕೊಂಡೇ ಕುಳಿತ ಚೌಡವ್ವ ಶಿವುಗನ ತಪಸ್ಸಿಗೆ ಮೆಚ್ಚಿ ಪ್ರತ್ಯಕ್ಷವಾದಾಗ ಅವನನ್ನು ಎಚ್ಚರಿಸುವುದಕ್ಕೆ. ಹಗಲೂಟದ ಹೊತ್ತಾಯಿತು. ಕೆಂಚನು ತಡಬಡಿಸಹತ್ತಿದ. "ಶಿವಣ್ಣಾ ಹೊಟ್ಟೆ ಹಸಿಯುತ್ತಲ್ಲೋ" ಎಂದ. "ಹಾಗಾದರೆ ನಾಳೆ ಬರೋಣ." ಎಂದು ಶಿವು ಮರುನುಡಿದ. ಇನ್ನು ಮೇಲೆ ದಿನವೂ ಹೀಗೆಯೇ ತಪಸ್ಸು ಮಾಡಬೇಕು ಯಾವ ಗಳಿಗೆಯಲ್ಲೋ ಚೌಡವ್ವ ಪ್ರತ್ಯಕ್ಷವಾಗಿ ಬಿಡುತ್ತಾಳೆ, ಅವಳ ಬರವನ್ನೇ ನಾವು ಬಹಳ ಎಚ್ಚರಿಕೆಯಿಂದ ಕಾಯುತ್ತಿರಬೇಕು. ದಿನವೂ ಮಧ್ಯಾಹ್ನದ ಶಾಲೆಗೆ ಇಲ್ಲಿಗೇ ಬಂದು ಬಿಡಬೇಕು. ಎಂದು ನಿರ್ಧಾರವಾಯಿತು.

ಇಬ್ಬರೂ ಸ್ಕೂಲಿಗೆ ಸರಿಯಾಗಿ ಬರುವುದಿಲ್ಲ, ಪೋಲಿಗಳಾಗಿ ತಿರುಗುತ್ತಿದ್ದಾರೆಂದು ಮನೆಯವರಿಗೆ ದೂರು ಹೋಯಿತು. ಮಂಜಯ್ಯ ಮೇಷ್ಟರನ್ನು ಈ ತಪಸ್ವಿಗಳಿಬ್ಬರೂ ಶಪಿಸಿಬಿಟ್ಟರು. ಶಪಿಸಿ ತಮ್ಮ ತಪಶ್ಶಕ್ತಿಯನ್ನೆಲ್ಲಾ ಹಾಳುಮಾಡಿಕೊಂಡು ಬಿಟ್ಟರು. ಮನೆಯವರ ಬೈಗುಳು ನೂರ್ಮಡಿಯಾಯಿತು. ಆ ಮಂಜಯ್ಯ ಮೇಷ್ಟ್ರು ಶಿವುಗನ ದೂರದ ಸಂಬಂಧಿಯಾಗಿದ್ದುದರಿಂದ ಅವರು ಹೇಳುವುದನ್ನೆಲ್ಲಾ ಮನೆಯವರು ನಂಬಿಬಿಡುತ್ತಿದ್ದರು. ಆ ಮೇಷ್ಟರು ಇನ್ನೂ ಹೊಸಬರಾಗಿದ್ದುದರಿಂದಲೋ, ಅದೇ ಊರವರಾಗಿದ್ದುದರಿಂದಲೋ ಅಥವಾ ಕೆಲಸ ಸಿಗುವುದಕ್ಕೆ ಮೊದಲು ಐದಾರು ತಿಂಗಳ ಹಿಂದೆ ಎಮ್ಮೆ ಕಾಯುತ್ತಿದ್ದುದರಿಂದಲೋ ಯಾವ ಹುಡುಗನೂ ಅವರಿಗೆ ಹೆದರುತ್ತಿರಲಿಲ್ಲ. ಜೊತೆಗೆ ಶಿವೂನ ಬೀಗರು ಬೇರೆ. ಒಂದು ದಿನ ಮಂಜಯ್ಯ ಮೇಷ್ಟರು ಬೀಡಿಸೇದುತ್ತ ಹೊಗೆಯನ್ನು ಮುಗಿಲ ದೇವಿಗೆ ಅರ್ಪಿಸುತ್ತ ಶಿವುಗನ ಮನೆಯ ಮುಂದೆ ಹಾಯ್ದು ಹೋಗುತ್ತಿದ್ದರು. ಶಿವುಗ "ಏ ಎಮ್ಮೆ ಕಾಯೋ ಮಂಜ" ಎಂದು ಕೂಗಿ ಒಳಗೆ ಹೋಗಿ ಅವಿತುಕೊಂಡ. ಪಾಪ! ಆ ಮೇಷ್ಟರು ಶಿವುಗನ ಮನೆಗೆ ಹೋಗಿ ಅವನ ತಂದೆಯನ್ನು ಕುರಿತು ತಮ್ಮದೇ ಆದ ಒಂದು ರೀತಿಯ ಗಾಂಭೀರ್ಯದಿಂದ ವೈಖರಿಯಿಂದ "ತೀರ್ಥಪ್ಪ ಮಾವನವರೇ, ತೀರ್ಥಪ್ಪ ಮಾವನವರೇ, ನನಗೆ ಎಲ್ಲರೂ ಮಂಜಯ್ಯ ಮೇಷ್ಟರೇ, ಮಂಜಯ್ಯ ಮೇಷ್ಟರೇ ಎಂದು ಕರೆಯುತ್ತಿರುವಲ್ಲಿ ನಿಮ್ಮ ಕಿರಿಯ ಮಗ ನನ್ನನ್ನು ಕಂಡೊಡನೆಯೆ ಏ "ಎಮ್ಮೆ ಕಾಯೋ ಮಂಜಾ" ಎಂದು ಕೂಗಬಹುದೇ?

ನಿಮ್ಮ ಮಗನಿಗೆ ಬುದ್ಧಿವಾದ ಹೇಳಿ ದಯವಿಟ್ಟು" ಎಂದು ಭಾಷಣ ಮಾಡಿ ಸೇದುತ್ತಿದ್ದ ತುಂಡು ಬೀಡಿಯನ್ನು ಎಸೆದು ಕಿಸೆಯಿಂದ ಹೊಸ ಬೀಡಿ ಶಿವು ಡನ್ನು ತೆಗೆದು ಅವರ 'ತೀರ್ಥಪ್ಪ ಮಾವ' ನಿಗೆ ಒಂದನ್ನು ಕೊಟ್ಟು ತಾನೂ ಒಂದನ್ನು ಬಾಯಲ್ಲಿಟ್ಟುಕೊಂಡು ಕಡ್ಡಿ ಹತ್ತಿಸಿ ತನ್ನ ಬೀಡಿಗೆ ಬೆಂಕಿ ತೋರಿಸಿ ಮಾವನ ಬೀಡಿಗೂ ಕಿಚ್ಚುಸಿಕ್ಕಿದರು. ಅಲ್ಲಿಯೇ ಮೊಗ್ಗುಲಲ್ಲಿ ಕುಳಿತಿದ್ದ ಅಡ್ಡ ಮನೆ ಮುಳ್ಳಯ್ಯ—ಅವನಿಗೂ ಬೀಡಿ ಕೊಡದಿದ್ದುದಕ್ಕೋ ಏನೋ— "ಊಂ ಹೋಗಲಿ! ನಿಂದೇನು (ನಿನ್ನ ಚರಿತ್ರೆ) ಯಾರಿಗೂ ಅರೇದ್ದಲ್ಲ (ಅರಿಯದ್ದಲ್ಲ) ಏನೋ ಹೇಳಾಕೆ ಬಂದಾನಿಲ್ಲಿ!" ಎಂದು ಗದರಿಬಿಟ್ಟ. ಮಂಜಯ್ಯ ಮೇಷ್ಟರು ಸಪ್ಪೆಮುಖಮಾಡಿಕೊಂಡು ಗೊಣಗುತ್ತಾ ಮನೆಯ ಕಡೆಗೆ ಜಿಣುಗಿದರು.

*  *  *  *

ಶಿವುಗನೂ ಕೆಂಚನೂ ನಾಲ್ಕುರೂಪಾಯಿನ ಪರೀಕ್ಷೆಗೆ ಓದುವ ತರಗತಿಗೆ ಬಂದರು. ಬರುವುದೇ ತಡ ಹುಡುಗ 'ಕೆಲಸಕ್ಕೆ ಬಂದ' ಎಂದು ಅವರ ಮನೆಯವರು ಕೆಂಚನನ್ನು ಸ್ಕೂಲು ಬಿಡಿಸಿದರು. ಶಿವುಗನೂ ಶಾಲೆಗೆ ಶರಣು ಹೊಡೆದ. ಕೆಂಚನ ಮನೆಯಲ್ಲಿ ಸುಮಾರು ದನಗಳಿದ್ದುದರಿಂದ ಅವನಿಗೆ 'ಗೋಪಾಲ' ನ ಹುದ್ದೆ ದೊರೆಯಿತು. ಶಿವುಗನೂ ಅವರ ತಂದೆಗೆ ಹೇಳಿದ "ಇನ್ನೊಂದು ನಾಲ್ಕಾರು ಆಕಳುಗಳನ್ನು ಕೊಳ್ಳಿರಿ, ದನ ಕಾಯುತ್ತೇನೆ" ಎಂದು. ಅವರ ಮನೆಯವರಿಗಷ್ಟು ಬುದ್ಧಿ ಹೊಳೆಯಬೇಕಲ್ಲ! ಅವನ ಮಾತನ್ನು ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ.

ಆ ಊರಿನಲ್ಲಿ ಮುಖಂಡನಾಗುವ ಆಶೆಯುಳ್ಳವನಿಗೆ ಕೆಲವೇ ಮಾರ್ಗಗಳಿವೆ. ದೈವುಳ್ಳವನಾಗಿರಬೇಕು, ಇಲ್ಲವೇ ಕುಸ್ತಿ ಕಸರತ್ತು ಮಾಡಿದವನಾಗಿರಬೇಕು, ಅದೂ ಇಲ್ಲದಿದ್ದರೆ ಐದಾರುಬಾರಿ ಬಣ್ಣ ಹಚ್ಚಿಕೊಂಡು 'ರಾಜಾ ಪಾರ್ಟ್' ನೋ 'ರಾಣಿಪಾರ್ಟ್' ನೋ ಮಾಡಿರಬೇಕು. ಅವರೇನು ಹಣವಂತರಾಗಿರಲಿಲ್ಲ, ಊರಲ್ಲಿ ಗರಡಿಮನೆ ಇರಲಿಲ್ಲ. ಇನ್ನುಳಿದಿದೆಯಲ್ಲ ರಂಗಭೂಮಿ. ಇಳಿದರು. 'ಆಟ' ಕ್ಕೆ ಸೇರುವುದರ ಇನ್ನೊಂದು ಉದ್ದೇಶ ಇಬ್ಬರೂ ಜೊತೆಗೇ ಇದ್ದ ಹಾಗೂ ಆಯಿತು ಎನ್ನುವುದು. ಅವರಿಗೆ ಮೊದಲು ಮೊದಲು ಚಿಕ್ಕ ಚಿಕ್ಕ 'ಪಾರ್ಟು' ಗಳೇ ದೊರಕಿದುವು. ಆಮೇಲೆ 'ನಳಚರಿತ್ರೆ' ಆಡಿ

ದಾಗ ಶಿವುಗ ಶೂರಶೇನ, ಕೆಂಚ ಶೂರಶೇನೆ. ಅವರಿಗೆ 'ಯಾಸ' ಒಪ್ಪಿದಂತೆ ಇನ್ನಾರಿಗೂ ಆ ಹಿಂದೆ ಒಪ್ಪಿಲಿಲ್ಲವಂತೆ. ಮೇಲಾಗಿ ಅವರ ಮಾತು ಕತೆ ಅಭಿನಯ ಹಾಡುಗಾರಿಕೆ ಇವಕ್ಕೆ ಊರಿಗೂರೇ ಮೆಚ್ಚಿಬಿಟ್ಟಿತು.

ಅವರಿಬ್ಬರ ಗೆಳೆತನವೂ ಬೆಳೆಯಿತು. ಊರಲ್ಲಿ ಯಾರಾದರೂ ಇಬ್ಬರು ಹುಡುಗರು ಜೊತೆಯಾಗಿಬಿಟ್ಟರೆ ಸಾಕು, ಊರ ಜನಗಳು ಅವರನ್ನು ಕುರಿತು "ಏನ್ರೋ ಕೆಂಚ ಶಿವುಗ ಆಗಿಬಿಟ್ರಿ" ಎನ್ನುತ್ತಿದ್ದರು. ನಳಚರಿತ್ರೆ ಆಡಿದ ಮೇಲೆ ಶಿವುಗನೂ ಕೆಂಚನೂ ಶೂರಸೇನ ಶೂರಶೇನಿ ಆಗಿಬಿಟ್ಟಿದ್ದರು. ಊರಿನ ಯಾರ್ಯಾರೋ ಕೆಂಚನನ್ನು 'ಶೂರಶೇನೀ' ಎಂದು ಕರೆದು ಅವನಿಂದ ಬೈಗಳು ತಿಂದಿದ್ದರು. ಅಂತು ಅವರ ಕೆಳೆಯ ಸಸಿ ಕೋಮಲವಾಗಿ ಬೆಳೆದು ಬಲಿತು ಎಲ್ಲರ ಮೆಚ್ಚುಗೆಗೂ ಪಾತ್ರವಾಗಿತ್ತು.

* * * *

ಆ ಊರಿನಲ್ಲಿರುವುದು ಒಂದೇ ಜವಳಿ ಅಂಗಡಿ. ಆದುದರಿಂದ ಅಂಗಡಿಯವನು ಕೇಳಿದಷ್ಟು ದುಡ್ಡು ಕೊಟ್ಟು ಬಟ್ಟೆ ಕೊಂಡು ಅಂಗಿ ಹೊಲಿಸಿಕೊಳ್ಳಬೇಕು. ಕೆಂಚ ಯಾರವೋ ಹಸುಗಳನ್ನು ತನ್ನ ಹಸುಗಳ ಜೊತೆಗೆ "ಹೊಡೆದುಕೊಂಡು" ಹೋಗಿ ಕಾದುದಕ್ಕಾಗಿ ಅವನಿಗೆ ನಾಲ್ಕಾರು ರೂಪಾಯಿ ಸಂಭಾವನೆ ದೊರಕಿತ್ತು. ಕೆಂಚ ಅಂಗಿ ಹೊಲಿಸಿಯೇ ಬಿಟ್ಟ. ಶಿವುಗನೂ ಅದೇ ಬಟ್ಟೆಯನ್ನು ಕೊಳ್ಳುವುದರೊಳಗೆ ಆ ಬಟ್ಟೆ ಕೆಂಚ ಕೊಂಡುದ್ದಾದುದರಿಂದ ಒಂದೆರಡು ದಿನಗಳಲ್ಲಿಯೇ ಖರ್ಚಾಗಿ ಹೋಯಿತು. ಶಿವುಗನಿಗೆ ಬಟ್ಟೆ ಸೊನ್ನೆಯಾಯಿತು. ಅದೇ ತರದ ಬಟ್ಟೆ ಬರುವವರೆಗೂ ಹರಕು ಅಂಗಿಯನ್ನೇ ತೊಟ್ಟುಕೊಂಡಿರಬೇಕಾಯ್ತು. ಇದನ್ನು ಕಂಡು ಊರವರೆಲ್ಲಾ "ರಾಮ ಲಕ್ಷ್ಮಣ," "ಲವ ಕುಶ" ಹೀಗೆಂದು ಹಾಸ್ಯ ಮಾಡತೊಡಗಿದರು. ಊರವರು ಹಾಗೆನ್ನುವುದಕ್ಕೆ ಇನ್ನೊಂದು ಕಾರಣ ಅವರು ಆ ವರ್ಷ 'ಲವಕುಶ' ಆಟವನ್ನು ಕಟ್ಟಿದ್ದು. ಅವರಿಬ್ಬರ ಗೆಳೆತನದ ವಿಷಯವಾಗಿ ಕೆಂಚನ ತಾಯಿ "ಎರಡೂ ಒಂದು ಗಳಿಗೆಯೂ ಅಗಲಿತೋದಿಲ್ಲ, ಒಂದೇ ಗಂಗಾಳ್ದಾಗುಣ್ತಾವೆ, ರಾಮಲಕ್ಷ್ಮಣ ಹಾಂಗಿದ್ರೋ ಇಲ್ಲವೋ ?" ಎಂದಿದ್ದರು.

ಬೇಸಿಗೆಯಲ್ಲಿ ಚೆಂಡಾಟಕ್ಕೆ ಒಳ್ಳೆ ಪ್ರಾಯ; ಅದರಲ್ಲಿಯೂ ಯುಗಾದಿ ದಿನ. ಕೆಂಚನಿಗೂ ಬಿಡುವಿದ್ದುದರಿಂದ ಚೆಂಡಾಟಕ್ಕೆ ಧುಮುಕಿದ. ಶಿವು

ಗನೂ ಬಿಡುವುಮಾಡಿಕೊಂಡು ಚೆಂಡಾಟಕ್ಕೆ ನಿಂತ. ಆಟದ ಬಿರುಸು ಜಾಸ್ತಿ ಯಾಗುತ್ತಾ ಬಂತು. ಓಡುತ್ತಿರುವಾಗ ಕೆಂಚನು 'ಹೊರಕಾಲು' ಕೊಟ್ಟುದ ರಿಂದ ಶಿವುಗ ನೆಲಕ್ಕೆ ಧೊಪ್ಪನೆ ಕೆಡೆದು ಮೂರು ಲಾಗ ಒಗೆದ—ಕೈ ಮುರಿಯಿತು. ಶಿವುಗನನ್ನು ಹೊತ್ತು ತಂದು ಮನೆಗೆ ಹಾಕಿದರು. ಶಿವೂನ ಮನೆಯವರಿಗೆ ಇದನ್ನು ನೋಡಿ ಸಹಿಸಲಾಗಲಿಲ್ಲ. "ಯಾವ ಸೂ....ಮಗ ಕೆಡವಿದನು ಹೇಳು ಅವನನ್ನು ಚಿಗಿದು ತೋರಣ ಕಟ್ಟಿಬಿಡುತ್ತೇನೆ" ಎಂದು ಶಿವೂನ ತಂದೆ ಗುಡುಗಿದರು. ಆ ಆವೇಶದಲ್ಲಿ ಅವರು ಕೆಂಚನನ್ನು ಚಿಗಿದೇ ಬಿಡುತ್ತಿದ್ದರು.

"ಯಾರೂ ಇಲ್ಲ, ನಾನೇ ಬಿದ್ದೆ" ಎಂದ ಶಿವೂ.

"ಹಾಗಂದರೇನೋ? ಕೆಂಚನೇನೋ ನಿನ್ನನ್ನು ಹೊರಗಾಲು ಕೊಟ್ಟು ಕೆಡವಿದಂನತೆ? ಸುಳ್ಳು ಹೇಳ್ತೀಯಾ."

"ಅಲ್ಲ ಅಲ್ಲಾ, ನಾನು ಓಡುತ್ತಿರುವಾಗ ಅವನ ಕಾಲನ್ನು ಎಡಹಿ ಬಿದ್ದು ಬಿಟ್ಟೆ, ಅಷ್ಟೆ. ಅದಕ್ಕೆ ಪಾಪ, ಕೆಂಚ ಹೊಣೆಯೇ?" ಎಂದ ಶಿವುಗ.

'ಹೂಂ' ಎನ್ನುತ್ತ ತಿನ್ನುವಂತೆ ನೋಡಿ ಸುಮ್ಮನಾದರು ಶಿವೂನ ತಂದೆ.

ಕೆಂಚನ ದೆಸೆಯಿಂದ ಚೊಂಚನಾದರೂ ಅವನ ಸಹವಾಸ ಬಿಡಲಿಲ್ಲ ಎಂದು ಊರ ಜನ ಆಡಿಕೊಂಡರು. ಕೆಂಚ ಶಿವುಗರು ಅದನ್ನು ಕೇಳಿ ನಕ್ಕು ಸುಮ್ಮನಾಗುತ್ತಿದ್ದರು.

ಸುಗ್ಗಿಯ ಕಾಲದಲ್ಲಿ ಹೋರಿ, ದನ ಕರುಗಳಿಗೆ ಎಲ್ಲೂ ಇಲ್ಲದ ಆದರ. ಬರುವ ಜಾತ್ರೆಯಲ್ಲಿ ಅವನ್ನು ಮಾರಿ ಚೆನ್ನಾಗಿ ಲಾಭ ಸಂಪಾದಿಸೋಣ ವೆಂದೋ 'ಇನಾಂ' ಹೊಡೆಯೋಣವೆಂದೋ ತಮ್ಮ 'ಹೊಟ್ಟೆ ಬಟ್ಟೆಯನ್ನೂ ಕಟ್ಟಿ' ಮೇಯಿಸುತ್ತಾರೆ. ಹೋರಿಗಳೋ ಮೇದು ಮೇದು ಮದದಾನೆ ಯಾಗಿರುತ್ತವೆ! ಒಂದು ದಿನ 'ಶಂಪಳ್ಳಿ ಕುಂಟಬಸ್ಯ' ತನ್ನ ಮೇದ ಹೋರಿ ಯನ್ನು ಕೈಬಿಟ್ಟುಬಿಟ್ಟಿದ್ದ. 'ಕುಂಟಬಸ್ಯ' ದೈವುಳ್ಳವನಾಗಿದ್ದುದರಿಂದ ಅವನಿಗೆ ಹೇಳುವವರು ಕೇಳುವವರು ಯಾರೂ ಇರಲಿಲ್ಲ. ಆ ಹೋರಿ ಇರಿ ಯುವ ಚಾಳಿಯನ್ನು ಚೆನ್ನಾಗಿ ಕಲಿತಿತ್ತು. ದಿಡಕೆ ಹಾಕುತ್ತ ಹೊರಟು ಕಂಡಕಂಡವರ ಮೇಲೆ ಏರಿಹೋಗಿ ಊರಿಗೂರನ್ನೇ ಗಡಗಡನೆ ನಡುಗಿಸು ತ್ತಿತ್ತು. ಅಲ್ಲಿಯೇ ಇದ್ದ ಕೆಂಚ ಆ ಹೋರಿಯನ್ನು ಹಿಡಿಯಬೇಕೆಂದು ಧೈರ್ಯ

ಮಾಡಿ ಮುಂಬರಿದು ಹೋಗಿ ಹಿಡಿಯುವುದರ ಬದಲು ತಾನೇ ಆ ಹೋರಿಯ ಕೊಂಬಿನ ಬಾಯಿಗೆ ಈಡಾದನು. ಕೆಂಚ ಮುಖ ಅಡಿಯಾಗಿ ಮಲಗಿಕೊಂಡು ಹೋರಿಯ ಮೂಗುದಾರವನ್ನೇ ಬಲವಾಗಿ ಹಿಡಿದುಕೊಂಡಿದ್ದುದರಿಂದ ಕೊಂಬಿನ ಇರಿತವನ್ನಲ್ಲದಿದ್ದರೂ ಅದರ ಮುಂದಲೆಯ ಗುದ್ದನ್ನು ಚೆನ್ನಾಗಿ ಅನುಭವಿಸಿದ. ಜನಗಳೆಲ್ಲಾ ಸುತ್ತಲೂ ಗುಂಪು ಕಟ್ಟಿಕೊಂಡು "ಹೇ" "ಹೇ" ಎಂದು ಕೂಗುತ್ತಿದ್ದರೇ ಹೊರತು ಹತ್ತಿರ ಹೋಗುವ ಎದೆ ಯಾರಿಗೂ ಬರಲಿಲ್ಲ. ಎಲ್ಲಿಯೋ ಇದ್ದ ಶಿವುಗ ಓಡಿಬಂದು "ಅಯ್ಯೋ ಹಂಬೇಡಿಗಳೇ ಸುಮ್ಮನೆ ನಿಂತಿದ್ದೀರಲ್ಲೊ ಕುಸ್ತಿನೊಡ್ತಾ" ಎನ್ನುತ್ತ ಅಲ್ಲಿಯೇ ಇದ್ದ ಹುಲ್ಲುಮನೆಯ ಸೂರಿನಿಂದ ಒಂದು ಗಳುವನ್ನು ಹಿರಿದುಕೊಂಡು ಜನಗಳ ಮಧ್ಯೆ ತೂರಿಕೊಂಡು ಧುಮುಕಿದ—ರಣರಂಗಕ್ಕೆ. ಕೆಂಚನು "ಬರಬೇಡ ಕಣೋ ನಿನ್ನನ್ನೂ ಅರೆದು ಬಿಡುತ್ತೆ" ಎನ್ನುವ ಮಾತು ಇನ್ನೂ ಅವನ ಬಾಯಲ್ಲಿದ್ದಂತೆಯೇ ಶಿವುಗ "ನೀನು ಸಾಯಿ ನಾನು ಬದುಕುತ್ತೇನೆ" ಎಂದು ಶಿಡುಕಿ ಹೋರಿಯ ತಲೆಗೆ ಗಳುವಿನಿಂದ ಬಲವಾಗಿ ಒಂದೇಟು ಕೊಟ್ಟ. ಆ ಹೋರಿ ಇನ್ನಷ್ಟು ಕೆರಳಿ ಗಳುವಿನೊಂದಿಗೇ ಸರ‍್ರನೆ ಶಿವುಗನೆಡೆಗೆ ತಿರುಗಿತು. ದೈವವಶಾತ್ ಆ ಗಳುವು ಹೋರಿಯ ಮುಂಗಾಲುಗಳ ಮಧ್ಯೆ ಸಿಕ್ಕಿಕೊಂಡಿದ್ದುದರಿಂದ ಅದು ಸ್ವಲ್ಪ ತಡಬಡಿಸಿತು. ಅಷ್ಟರಲ್ಲಿಯೇ ಕೆಂಚ ಸಿಂಗದ ಮರಿಯಂತೆ ರಯ್ಯನೆ ಚಿಗಿದು ಮೂಗುದಾರವನ್ನು ಇನ್ನೂ ಬಿಗಿಯಾಗಿ ಹಿಡಿದು ಹೋರಿಯ ತಲೆಯನ್ನು ನೆಲಕ್ಕೆ 'ಊರಿಸಿ' ತನ್ನ ಶಕ್ತಿಯನ್ನೆಲ್ಲಾ ಉಪಯೋಗಿಸಿ ಅದುಮುತ್ತಿದ್ದ. ತಾನು ಹಿಡಿದಿದ್ದ ಮೂಗುದಾರವೂ ಕಿತ್ತುಹೋಯಿತು. ಆದರೂ ಅದರ ಮೂಗಿನ ಸೊಂಬೆ (ಹೊಳ್ಳೆ) ಯನ್ನು ಬಲವಾಗಿ ಹಿಡಿದು ಯಮನೊಂದಿಗೆ ಹೋರಾಡುವವನಂತೆ ಹೋರಾಡುತ್ತಿದ್ದ. ಶಿವುಗನು ತನ್ನ ಕಸುವನ್ನೆಲ್ಲಾ ಕೈಗಳಿಗೆ ತಂದು ಅದರ ಕೊಂಬನ್ನು ಹಿಡಿದು ಅಮುಕಹತ್ತಿದ. ಹೋರಿ ನೆಲಕ್ಕೆ ಬಿದ್ದಿತು. ಆಮೇಲೆ ಇನ್ನುಳಿದ 'ಪ್ರೇಕ್ಷಕರು' ನಿಧಾನವಾಗಿ ಬಂದು ಹೋರಿಯ ಹಿಂಗಾಲುಗಳನ್ನು ಸೇರಿಸಿ ಬಿಗಿದುಕಟ್ಟಿ, ಕೆಡವಿ, ಮೂಗುದಾರವನ್ನು 'ಸರಿ' ಮಾಡಿ ಎಡಕ್ಕೊಂದು ಬಲಕ್ಕೊಂದು, ಮುಡುಹಿನ ಮೇಲೊಂದು—ಹೀಗೆ ಮೂರು ಹಗ್ಗ 'ಹಚ್ಚಿ' ಹೋರಿಯನ್ನು ಮನೆಗೆ ಕೊಂಡೊಯ್ದರು.

* * * * *

ದೀವಳಿಗೆ ಹಬ್ಬವೆಂದು ಕಾಣುತ್ತದೆ, ಅಂದು ಹರೆಯದ ಹುಡುಗರು ಬಸವಣ್ಣನ ಗುಡಿಯ ಮುಂದಿದ್ದ ದುಂಡಿಯೊಂದನ್ನು ಎತ್ತಿ ತಮ್ಮ ಶಕ್ತಿಯನ್ನು ತುಲನೆಮಾಡಿಕೊಳ್ಳುತ್ತಿದ್ದರು. ಅದನ್ನು ನೋಡುವುದಕ್ಕೆಂದು ಗಂಡಸರು ಹೆಂಗಸರು ಮಕ್ಕಳು ಎಲ್ಲರೂ ನೆರೆದಿದ್ದರು. ಮೂರು ನಾಲ್ಕು ಜನ ಕಟ್ಟಾಳುಗಳು ದುಂಡಿಯನ್ನು ಎತ್ತಿ ಹೆಗಲೇರಿಸಿಕೊಂಡು ಕೆಳಗಿಳುಹಿದರು. ಶಿವುಗನೂ ಸರಾಗವಾಗಿ ದುಂಡಿ ಎತ್ತಿದ. ಕೆಂಚ ತೆಳ್ಳಗೆ ಬೆಳ್ಳಗೆ ಇದ್ದು ನೋಡುವುದಕ್ಕೆ ಚೆಲುವನಾಗಿದ್ದರೂ ಅಷ್ಟು ಶಕ್ತಿಯುತನಾಗಿರಲಿಲ್ಲ. ಆದರೂ ದುಂಡಿ ಎತ್ತಲು ತಾನೂ ಒಬ್ಬ ಹುರಿಯಾಳಾದ. ದುಂಡಿ ಅವನ ಮೊಣಕಾಲ ತನಕ ಅಡರಿ ಮೇಲಕ್ಕೇರಲು ತನ್ನಿಂದ ಆಗದೆ ಮತ್ತೆ ನೆಲಕ್ಕೆ ಬಿದ್ದುಬಿಟ್ಟಿತು. ಕೆಂಚನ ಮುಖ ಬೆಳ್ಳಗಾಯಿತು. ಸಾಲದ್ದಕ್ಕೆ ಹೆಂಗಸರ ಗುಂಪಿನಿಂದ ಯಾವುದೋ ಒಂದು ಹುಡುಗಿ "ಶೂರಶೇನೀ" ಎಂದುಕೊಂಡು ಕುಸುಕುಸು ನಕ್ಕುಬಿಟ್ಟಿತು. ಕೆಂಚನ ಅಂದಿನ ಸ್ಥಿತಿ ಬಣ್ಣನೆಗೆ ನಿಲುಕದ ಮಾತು. ಕೆಂಚ, ಅಂದು ಅವೊತ್ತಿನ ಮಾರನೇ ದಿನ, ಶಿವುಗನೊಂದಿಗೆ "ಅದೆಲ್ಲಾ ಏನು ಮಹಾ, ಹಿಡಿತ ಗೊತ್ತಿದ್ದರೆ ಆಯಿತು, ಬರೀ ಶಕ್ತಿಯಿಂದ ಸಾಧ್ಯವಿಲ್ಲ." ಎಂದು—ಶಿವುಗನು ಕೇಳಿಸಿಕೊಳ್ಳಲಿ ಬಿಡಲಿ—'ಅಂದುಕೊಂಡಿದ್ದ' ನೂರುಬಾರಿ.

* * *

ಕೆಂಚನ ಹೊಲದಲ್ಲಿ ಕೋಮಲವಾಗಿ ಸೊಂಪಾಗಿ ಬೆಳೆದಿದ್ದ ಬಿಳಿ ಜೋಳದ 'ನಿಲುವಿ' ನಲ್ಲಿ ಒಂದು ಹೊರೆ ಸೊಪ್ಪೆ ಮಾಯವಾಗಿತ್ತು. ಅವರಿಬ್ಬರೂ ಸೇರಿಕೊಂಡು ಮೇಯಿಸುತ್ತಿದ್ದ ಹೋರಿಯ ಕರುವಿಗಾಗಿ ಆ 'ನಿಲುವು' ಮೀಸಲಾಗಿತ್ತು. ಮೀಸಲನ್ನು ಅಳಿದ ಆ "ಹೆಗ್ಗಳ್ಳನಾರೆಂಬುದನ್ನು ಊಹಿಸುವುದಕ್ಕೆ ಅವರಿಗೆ ತಡ ಹಿಡಿಯಲಿಲ್ಲ. ಸೊಪ್ಪೆ ಕೊಯ್ದ ಎಡೆಯಲ್ಲಿ ಬೇಯಿಸಿದ ಅವರೆಕಾಯಿಯ ಸಿಪ್ಪೆ ಬಿದ್ದಿದ್ದುವು. ಕಳ್ಳನ ಎರಡು ಹೆಜ್ಜೆಗಳೂ ನೆಲದ ಮೇಲೆ ಸರಿಯಾಗಿ ಮೂಡಿರಲಿಲ್ಲ. ಕೆಂಚ ಶಿವುಗರು ಅಂದು ಹೊಲದಲ್ಲಿ ಅವರೇಕಾಯಿ ಬೇಯಿಸುತ್ತಿದ್ದಾಗ ಅಲ್ಲಿಗೆ ಹೋಗಿ ಅವರಲ್ಲಿ ಅವರೇಕಾಯಿ ತಿಂದುಕೊಳ್ಳುವುದಕ್ಕೆ ಬಂದಿದ್ದ ಶಂಪಳ್ಳಿ ಕುಂಟ ಬಸ್ಯನೇ ಆ 'ನಿಲು' ವನ್ನು ನೋಡಿ ಕೆಂಚ ಶಿವುಗರು ಅಂದು ಮನೆಗೆ ಹೋಗುವವರೆಗೂ ಕಾದಿದ್ದು ಅವರು ಆ ಕಡೆಗೆ ಹೋದ ಮೇಲೆ ಒಂದು ಹೊರೆ ಸೊಪ್ಪೆಯನ್ನು ಎಗರಿಸಿದ್ದ. ಶಿವುಗನೂ

ಹಾಗೆಯೇ ಊಹಿಸಿದ್ದ. ಬೀಡಿ ಕೇಳುವ ನೆವದಿಂದ ಶಂಪಳ್ಳಿ ಮನೆಗೆ ಹೋಗಿ ನೋಡಿದ. ಅವನ ತಂಗಿಯನ್ನು ಕುರಿತು "ಎಲ್ಲೀದು ಈ ಬಿಳಿಜೋಳದ ಸೊಪ್ಪೆ? ಎಷ್ಟು ಚೆನ್ನಾಗಿದೆ." ಎಂದ. "ನಾವೂ ಗಡಿ ಹೊಲದಲ್ಲಿ ಹಾಕಿದ್ದೇವೆ." ಎಂದಳು. ಅವರ ಗಡೀ ಹೊಲದ ಬೆಳಸು ಕೆಂಚ ಶಿವುಗರಿಗೆ ಗೊತ್ತಿಲ್ಲದ್ದೆ? ಅದು ಬೆಳೆದಿರುವುದು ಮೂರೇ ಗೇಣುದ್ದ. ಇನ್ನು ಕೇಳಬೇಕೆ? ಮರುದಿನ ರಾತ್ರಿ ಕೆಂಚ ಶಿವುಗ ಜೊತೆಯಾಗಿ ಆ ಮೂರು ಗೇಣುದ್ದದ ಸೊಪ್ಪೆಯನ್ನೆಲ್ಲಾ ಲೂಟಿಮಾಡಿದರು—ಒಂದು ಗರಿಯಿಲ್ಲದಂತೆ. ಅಷ್ಟು ಹೊತ್ತಿಗೆ ಅರ್ಧರಾತ್ರಿ ಮೀರಿತ್ತು. ಚಂದ್ರನ ಬೆಳಕು ಹಾಲು ಚೆಲ್ಲಿದಂತಿತ್ತು. ಅಲ್ಲಿಯೇ ಹರಟುತ್ತ ಬಹಳ ಹೊತ್ತು ಕುಳಿತರು. ಮಾತುಗಳೆಲ್ಲಾ ಮುಗಿದುವು. ಉದ್ದೇಶಪೂರ್ವಕವಾಗಿಯೋ ಹೇಗೋ....ಹುಡುಗಿಯರ ಸುದ್ದಿ ತೆಗೆದರು. ಯಾರ‍್ಯಾರನ್ನೋ ಬಯ್ದರು ಯಾರ‍್ಯಾರನ್ನೋ ಹೊಗಳಿದರು. ಕೆಂಚ "ಕಲ್ಮನೆಯವರ ಮನೆಯ ಜನ ಮುತ್ತಿನಂಥವರು ಎಂದ.

"ಓಹೋ ಗೊತ್ತಾಯ್ತು." ಎಂದ ಶಿವುಗ.

"ಏನು ಗೊತ್ತಾದದ್ದು?" ಎಂದ ಕೆಂಚನಿಗೆ ಶಿವುಗ "ಅದೇ ಹಿರೀದು ಇದೆಲ್ಲಾ." ಎಂದ.

"ಅಲ್ಲವೋ, ಇನ್ನೊಂದು ಇದೆಯಲ್ಲೋ ದುಂಡುಮುಖದ್ದು ಮಾವಿನ ಹೋಳಿನಂತ ಕಣ್ಣಿನದು." ಹೇಳಲಾರದೆ ಹೇಳಿದ ಕೆಂಚ.

"ಆಹಾ! ಏನು ಹೊಗಳಿದೆಯೋ! ಹಲಗೆ ಮುಖ, ಬಂಡಿಗಾಲಿ ಕಣ್ಣು ಇನ್ನೂ ಹಿರೀದು ಚೆನ್ನಾಗಿದೆ" ಎಂದ.

ಕೆಂಚ "ಅವರವರಿಗೆ ಇಷ್ಟವಾದದ್ದು ಅವರವರಿಗೇ ಚೆನ್ನಾಗಿ ಕಾಣುತ್ತೆ. ಹಿರೀದು ಹಿರಿಯರಿಗೆ ಕಿರೀದು ಕಿರಿಯರಿಗೆ." ಎನ್ನುತ್ತ ಅರ್ಥಪೂರ್ಣ ದೃಷ್ಟಿಯಿಂದ ಶಿವುಗನನ್ನು ನೋಡುತ್ತಿದ್ದ. ಶಿವುಗನ ತಲೆ ನೆಲ ನೋಡುತ್ತಿತ್ತು, ಕೇಳಿಸದವನಂತೆ ಸುಮ್ಮನಿದ್ದ. ೧–೨ ನಿಮಿಷ ಯಾರೂ ಬಾಯಿ ಬಿಡಲೇ ಇಲ್ಲ. ತಂಗಾಳಿ ಸುಳಿಯುತ್ತ ಬಂದು ಮೊಗ್ಗುಲು ಹೊಲದ ಜೋಳದ ಮೇಲೆ ಬೀಸಿ, ಜೋಳದ ನಿಲುವು ಕಿಲಕಿಲನೆ ನಕ್ಕಿತು. ಸ್ವಲ್ಪಹೊತ್ತಾದ ಮೇಲೆ ಶಿವುಗ "ಏನೋ ದೇವರ ಇಷ್ಟವಿದ್ದರೆ ಏಕಾಗಬಾರದು. ಆ ಚಿಂತೆಯೆಲ್ಲಾ ಏಕೆ? ನಾಳೆ ಇರೋರ‍್ಯಾರೋ ಸಾಯೋರ‍್ಯಾರೋ. ಏಳು ಹೊತ್ತಾಯ್ತು"

ಎಂದ. ಅಂತು ಶಂಪಳ್ಳಿ ಬಸ್ಯನ ಹೊಲವನ್ನು ತೆರ್‍ರನೆ ಕಿದ್ದಿ 'ಲೂಟಿ' ಯನ್ನು ಹೊತ್ತುಕೊಂಡು ಮನೆಗೆ ತೆರಳಿದರು.

* * *

ತೇರು ಹಬ್ಬ ಇನ್ನು ಎರಡು ತಿಂಗಳು ಉಳಿದಿತ್ತು. ಹಬ್ಬದಲ್ಲಿ ದಕ್ಷ ಬ್ರಹ್ಮನ ಕಥೆ 'ಆಡ' ಬೇಕೆಂದು ಹುಡುಗರೆಲ್ಲಾ ನಿರ್ಧರಿಸಿದರು. ಆಟ ಕಲಿಸು ವವನಿಗೆ ಎರಡು ಖಂಡುಗ ಜೋಳ 'ಗುತ್ತಿಗೆ' ಮಾಡಿ ಅವನನ್ನು ಕರೆದು ಕೊಂಡೂ ಬಂದರು. ಹೊಸದಾಗಿ ಮದ್ದಳೆಯನ್ನೂ ಬಿಗಿಸಿ 'ಕರ್ನೆ' ಹಾಕಿ ಸಿದ್ದೂ ಆಯಿತು. ಎಲ್ಲರೂ ಅವರವರ ವೇಷಗಳನ್ನು ಹಂಚಿಕೊಂಡರು. ವೀರಭದ್ರ, ದಕ್ಷ ಈ ಎರಡು ಪಾತ್ರಗಳು ಮಾತ್ರ ಕೇಂಚ ಶಿವುಗರಿಗೆ ಕಾದಿ ದ್ದುವು... ಸರಿ, ಮೊದಲಾಯಿತು ಗುದ್ದಾಟಕ್ಕೆ. ನಾನು ಕಿರಿಯವನು, ವೀರ ಭದ್ರನ ಪಾತ್ರ ಮಾಡಬೇಕು ಎಂಬುದು ಕೆಂಚನ ವಾದ. 'ನನ್ನ ಹಾಗೆ ರೋಷ, ಸಿಟ್ಟು, ಪರಾಕ್ರಮ ಅವನೆಲ್ಲಿ ತೋರಿಸಿಯಾನು ನಾನೇ ವೀರಭದ್ರ ಆಗಬೇಕು ಎಂಬುದು ಶಿವೂನ ವಾದ. ಕೆಂಚನಿಗೆ ಇನ್ನೂ ರೇಗಿತು. "ವೀರಭದ್ರನ ಪಾತ್ರ ನನಗೆ ಮಾಡೋದಕ್ಕೆ ಬರುವುದಿಲ್ಲವಂತೆ! ಅವನಿಗಿಂತ ಹೆಚ್ಚಾಗಿ ಮಾಡ್ತೇನೆ ನೋಡಲಿ ಬೇಕಾದರೆ—ದುಂಡಿ ಎತ್ತಿದ ಹಾಗಲ್ಲ" ಎಂದು ಕೆಂಚ ಸಿಡುಕಿದ. ಕಿತ್ತಾಟಕ್ಕೆ ಮೊದಲಾಯಿತು. ಅವರಿಬ್ಬರ ವಾಜ್ಯ ತೀರಿಸುದಕ್ಕೆ ಮುಂದೆ ಬರುವವರ ಎದೆಯಷ್ಟು! ಕೊನೆಗೆ ಕೆಂಚನ ತಂದೆಯತನಕ ದೂರು ಹೋಯಿತು. ಆವರೇ ಬಂದು ತೀರ್ಪು ಹೇಳಿದರು, ಒಬ್ಬನು ಒಂದುದಿನ ಇನ್ನೊಬ್ಬನು ಇನ್ನೊಂದು ದಿನ—ಹೀಗೆ ಯಾಸ (ವೇಷ) ಕಲಿಯಲಿ, ಹೇಗೂ ಎರಡುಸಾರಿ ಆಡಬೇಕಾಗುತ್ತೆ ; ಮೊದಲನೆಬಾರಿ ಶಿವುಗ ವೀರಭದ್ರನ ಪಾತ್ರ ವಹಿಸಲಿ ಆಮೇಲೆ ಕೆಂಚ ಮಾಡಲಿ ಎಂದವರೇ "ನಿನ್ನದು ಯಾವಾಗಲೂ ಇದೇ ರಗಳೆಯೇ" ಎಂದು ಕೆಂಚನನ್ನು ಬಯ್ಯುತ್ತ ಎಲೆ ಅಡಕೆಯ ಕೊಟ್ಟದಿಂದಲೇ ಅವನನ್ನು ಹೊಡೆಯುವುದಕ್ಕೆ ಎದ್ದರು. ಹೊತ್ತುಕೊಂಡಿದ್ದ ಹಚ್ಚಡ ಕಾಲಿಗೆ ಸಿಕ್ಕಿದ್ದರಿಂದ ಹಾಗೇ ಕೂತುಕೊಂಡರು. ಕೆಂಚನೇನೋ ಹಿತ್ತಿಲಬಾಗಿಲ ಮೂಲಕ ಪಲಾಯನ ಮಾಡಿದ್ದ. ಶಿವುಗ "ನಾನೇನೋ ಎರಡು ಸಾರೀನೂ ವೀರಭ್ರನೇ ಆಗುತ್ತೇನಪ್ಪ" ಎಂದು ಗೊಣಗುತ್ತ ಹೋದ.

ತೇರು ಹಬ್ಬ ಬಂತು. ಮೊದಲನೇ ಸಾರಿ ಶಿವುಗನೇ ವೀರಭದ್ರನ ವೇಷ ಹಾಕಿದ. ತೇರು ಹಬ್ಬಕ್ಕೆ ತಂದಿದ್ದ 'ಗ್ಯಾಸ್‌ಲೈಟು' ಗಳ ಪ್ರಭಾವಳಿ, ಅಟ್ಟ ಲನ್ನು ಬಹು ಚೆನ್ನಾಗಿ ಅಲಂಕರಿಸಿದ್ದಾರೆ, ಒಳ್ಳೆಯ ಆಟದ ದಿರ್ಸು (ಡ್ರೆಸ್) ಗಳನ್ನು ಬಾಡಿಗೆ ತಂದಿದ್ದಾರೆ. ಶಿವುಗನಿಗೆ ಅಂದು ಎಂದೂ ಇಲ್ಲದ ಹುರುಪು, ಆನಂದ. ಚೆನ್ನಾಗಿಯೇ ಅಭಿನಯಿಸಿದ. ಅವನ ಕುಣಿತ, ದಿರ್ಸು, ವೀರಾ ವೇಶ, ಮಾತು, ಇವುಗಳನ್ನು ನೋಡಿದ ಪ್ರೇಕ್ಷಕರು ಮನಸಾರೆ ಹೊಗಳಿ ದರು. ವೀರಭದ್ರನ 'ಯ್ಯಾಸ' ಮಾಡಿದರೆ ಹಿಂಗ್ಮಾಡಬೇಕಪ್ಪ ಏನು ಕುಣ್ತ ಏನು ಮಾತು! ದಿರ್ಸ ಹೆಂಗೆ! ಹಿಮ್ಮೇಳದವರ ಹಾಡೇನು! ಮದ್ದಲೆ ಹೊಡೆತ ಏನು! ಎಲ್ಲಾ ಒರೆದು ಬೆಸದಂಗಿತ್ತಪ್ಪ." ಎಂದುಕೊಂಡರು ಜನ. ಕೆಂಚನ ಮನೆಯವರಿಗೂ ಶಿವುಗನ ಮನೆಯವರಿಗೂ "ಅಂದು ಇಲ್ಲದ ಬಿಂಕ." ದಕ್ಷ ನಿಗೂ ಅದೇ ಪ್ರಶಸ್ತಿ ಬಂತು. ಆದರೆ ಕೊನೆಗೆ ಅವನು ವಿಧಿಯಿಲ್ಲದೆ ಸೋಲ ಬೇಕಾಗಿ ಬಂತು, ಸೋತು ಬಿಟ್ಟ. ಇಷ್ಟಾದರೂ ಹೆಂಗಸರೇನು ಆಡಿಕೊಳ್ಳು ವುದು ಬಿಡಲಿಲ್ಲ. "ಅಯ್ಯೋ ಎಂತಾ ಆಟ ಆಡ್ತಾವೆಯೇ ಆಟ ಮುಗಿಯೋವಾಗ ಮದುವೇನೆ ಮಾಡ್ಲಿಲ್ಲ." ಎಂದು ಆಡಿಕೊಂಡರು. ಇನ್ನು ಕೆಲವರು "ಹೂ ಬಿಡು ಯಾಸ ಎಂತ ಪಾಡಾಗಿ ಒಪ್ಪಿದ್ವು, ಕುಣ್ತ ನೋಡಾಕೊಂದು ಚಂದಾಯ್ತು." ಎಂದರು. ಅದು ಯಾವುದೋ ಹುಡುಗಿ ಹೆಣ್ಯಾಸ್ದೋನಿಗೆ ಸೀರೇನೇ ಪಾಡಾಗಿ ಉಡಿಸಿರ್ಲಿಲ್ಲವ್ವ ಅಂದಳು. ಅಂತು ನಾಟಕ ಮುಗಿಯಿತು. ಹೊತ್ತು ಮೂಡಿತು, 'ವ್ಯಾಸ' ಹಾಕಿದವರೆಲ್ಲಾ ಅದೇ ವೇಷಗಳಲ್ಲಿಯೇ ಊರಿನ ಇನ್ನೊಂದು ತುದಿಯಲ್ಲಿದ್ದ ಬೀರದೇವರ ಗುಡಿಗೆ ಹೋಗಿ ಮಂಗಳಾ ರತಿ ಮಾಡಿಸಿ ಅವರವರ ಮನೆಗೆ ತೆರಳಿದರು.

ಯುಗಾದಿ ಬಂತು—ಕೆಂಚನ ಸರದಿ ಆಗ. ಹದಿನೈದು ದಿನ ಮನೆಯ ಕೆಲಸ ಬೊಗಸೆಗಳನ್ನು ಬಿಟ್ಟುಬಿಟ್ಟು ಅವನ ಅಳತೆಗೆ ಸರಿಯಾಗಿ ಭುಜ ಕೀರ್ತಿ, ಕಿರೀಟ, ವೀರಗಾಸಿ, ಗುಂಡಿನ ಸರ, ಮೀಸೆ ಕೂದಲು, (ಅವನಿಗಿನ್ನೂ ಆಗ ಕುಡಿಮೀಸೆ,) ಇವನ್ನೆಲ್ಲಾ ಜೋಡಿಸಿಕೊಂಡ. ದನಿ ಸರಿಯಾಗಿರಬೇಕೆಂದು ಆಹಾರದ ವಿಷಯದಲ್ಲಿ ಬಹಳ ಎಚ್ಚರವಾಗಿದ್ದ. ಅನ್ನದ ವಿಷಯದಲ್ಲಿ ಹಸು, ಗೂಸಿನ ಹೆಂಗಸೂ ಅಷ್ಟು ಜಾಗರೂಕತೆಯಿಂದ ಇರುತ್ತಿರಲಿಲ್ಲವೇನೋ. ತೇರು ಹಬ್ಬದಲ್ಲಿ ಹಾಕಿದ್ದ ಅಟ್ಟಲು ಹಾಗೆಯೇ ಇತ್ತು. ಅದನ್ನು ಅಲಂಕಾರ ಮಾಡು

ವುದಕ್ಕೆ ಎರಡು ದಿನ ಬೇಕಾಯ್ತು—ಜೋಡು ಮದ್ದಳೆ ಶ್ರುತಿ ಓಲಗ ಬೇರೆ. ಕೆಂಚ ಸ್ತ್ರೀ ಪಾತ್ರ ಮಾಡುವವರು ತಂದಿದ್ದ ಗುಂಡಿನ ಸರಗಳನ್ನೆಲ್ಲಾ ಕಸಿದು ಕೊಂಡ—ತನಗೇ ಹೇರಿಕೊಳ್ಳುವುದಕ್ಕಾಗಿ. ಸಾಯಂಕಾಲದ ಹೊತ್ತಿಗೆ ಹಿಂದೆ ಬಂದಿದ್ದರ ನಾಲ್ಕರಷ್ಟು ಜನ ನೆರೆಯಿತು.

ಶಿವುಗನಿಗೆ ಅಂದು ಉತ್ಸಾಹವೇ ಇಲ್ಲ. ಆದರೂ ಶಕ್ತಿಮೀರಿ ಅಲಂಕಾರ ಮಾಡಿಕೊಂಡ. ಸಾಮಾನ್ಯವಾಗಿ ಹಳ್ಳಿಯ ಆಟಗಳಲ್ಲಿ ಅಡಕೆಯ ಪಟ್ಟೆಯ 'ಕತ್ತಿ'ಗಳನ್ನೇ ಉಪಯೋಗಿಸುತ್ತಾರೆ. ಆದರೆ ಕೆಂಚ ಶಿವುಗರು ದೇವರ ಬಳಿಯಿದ್ದ ಒಂದೊಂದು ಕತ್ತಿಯನ್ನು ತೆಗೆದುಕೊಂಡು ಹೋಗಿ ಬೆಳಗಿಸಿ ಅವು ಥಳಥಳ ಹೊಳೆಯುವಂತೆ ಮಾಡಿ ಇಟ್ಟುಕೊಂಡಿದ್ದರು. ಆಟ ಷುರುವಾಯಿತು. ದಕ್ಷನ 'ವ್ಯಾಸ' ಜನಗಳಿಗೆ ಮೆಚ್ಚಿಗೆಯಾಗಲಿಲ್ಲವೆಂದು ಕಾಣುತ್ತದೆ. ಅಲ್ಲದೆ ಶಿವುಗನೂ ಆಗಾಗ ನಾನು ಎರಡು ಸಾರಿಯೂ ವೀರಭದ್ರನ ವೇಷವನ್ನೇ ಹಾಕುತ್ತೇನೆಂದು ಗೊಣಗುತ್ತಿದ್ದ. 'ದಕ್ಷ' ನಾಗಲು ಅವನಿಗೆ ಮನಸ್ಸಿರ ಲಿಲ್ಲ. ಆ ಪಾತ್ರವನ್ನು ಅವನು ನಿಜವಾಗಿಯೂ ಸರಿಯಾಗಿ ಅಭ್ಯಾಸ ಮಾಡಿರ ಲಿಲ್ಲ. 'ದಕ್ಷನ ಪಾರ್ಟಿಗೆ ಕೆಂಚನೇ ಸರಿ' ಎಂದು ಯಾರೋ ಆಟದ ಹುಡುಗರೇ ಆಡಿಕೊಂಡಿದ್ದು ಅವನ ಕಿವಿಗೆ ಬಿತ್ತು. ಆ ನೋವನ್ನು ಹೇಗೋ ಸಹಿಸಿಕೊಂಡ. ತನಗಾದ ಅಸಮಾಧಾನವನ್ನು ಸ್ವಲ್ಪವೂ ತೋರಗೊಡಲಿಲ್ಲ ಮಾತ್ರವಲ್ಲ, ತನಗೆ ವಿರಾಮವಾದಾಗ ವೀರಭದ್ರನ ವೇಷ ಹಾಕಿಕೊಳ್ಳುತ್ತಿದ್ದ ಕೆಂಚನೆಡೆಗೆ ಹೋಗಿ ಅವನಿಗೆ ಮಾತು, ನಟನೆ, ಕುಣಿತ ಇವುಗಳ ವಿಷಯದಲ್ಲಿ ಉತ್ತಮ ಸಲಹೆಯೀಯುತ್ತಿದ್ದ. ಕೆಂಚನಿಗೆ 'ವೀರಗಾಸಿ' ಬಿಗಿದವನೂ ಅವನೇ.

ವೀರಭದ್ರ ರಂಗಭೂಮಿಗೆ ಬಂದ–ಒಡನೆಯೇ ಚಪ್ಪಾಳೆ ಷುರುವಾಯಿತು "ಏ ಭೇಷ್ ಒಪ್ಪೈತೆ ಕಣೋ" ಎಂದರು ಕೆಲವರು. "ಆ ಮಾತಿನ ಗತ್ತು ಬಿಗುವು ನೋಡೋ" ಎಂದ ಇನ್ನೊಬ್ಬ. "ಹೌದಪ್ಪ, ಹೌದಪ್ಪ, ನೀನೆ ವೀರಭದ್ರ" ಎಂದು ಯಾವನೋ ಒಬ್ಬ ಎದ್ದು ನಿಂತು ಕೈಮುಗಿದು ಬಿಟ್ಟ ಇದರ ಮುಂದೆ ತೇರಹಬ್ಬದ ವೀರಭದ್ರನನ್ನು ನಿವಾಳಿಯೆತ್ತಬೇಕು" ಅಂದ ಮತ್ತೊಬ್ಬ. ಶಿವುಗನ ಕಣ್ಣು ಕಿವಿ ಮನ ಎಲ್ಲಾ ಪ್ರೇಕ್ಷಕರ ಕಡೆಗೆ ಮತ್ತು ಹಾಗೆ ಆಡಿಕೊಳ್ಳುವವರ ಕಡೆಗೆ, 'ದಕ್ಷ'ನ ಪಾತ್ರದ ಕಡೆಗಲ್ಲ. ವೀರ

ಭದ್ರನ ಪಾತ್ರದ ವಿಷಯದಲ್ಲಿ ಏನು ಅಭಿಪ್ರಾಯ ಬರುತ್ತದೆಯೆಂಬುದನ್ನು ನೋಡುವುದೇ ಅದರ ಗುರಿ. ಕೆಂಚನ ನಡಿಗೆ, ಮಾತು, ಕುಣಿತ, ವೇಷಭೂಷಣ ಇವನ್ನು ನೋಡಿ ಶಿವುಗನಿಗೂ ನಾಚಿಕೆಯಾಯಿತು. ಅಯ್ಯೋ ನಾನು ಕೀಳಾದೆ ನಲ್ಲಾ ಎಂಬ ಭಾವನೆ ಅವನ ಮನಸ್ಸಿನಿಂದ ಹೊಡೆದಟ್ಟಿದರೂ ಹೋಗಲಿಲ್ಲ. ಶಿವುಗನಿಗೆ ಒಂದು ರೀತಿಯ ಬರೆ ಕೊಟ್ಟಂತಾಯಿತೆಂದೇ ಹೇಳಬೇಕು.

ಆಟ ಮುಗಿಯುವುದು ಇನ್ನೊಂದು-ಮುಕ್ಕಾಲು ಘಂಟೆ ಇತ್ತು. ಯುದ್ಧದ ದೃಶ್ಯ ಬಂತು. ಶಿವುಗನಿಗೆ ತನ್ನ ಅಸಮಾಧಾನದ ಜೊತೆಗೆ ವೀರ ಭದ್ರನ ಕೈಯಿಂದ ಹತವಾಗಬೇಕಲ್ಲಾ ಎಂದು ಬಿಗುಮಾನ ಬೇರೆ ಬಂತು. ನಾನೇ ವೀರಭದ್ರನಾಗಿದ್ದರೆ! ಎಂದುಕೊಂಡ. ಇವನ ಮನಸ್ಸಿನಲ್ಲಿದ್ದ ಆಂದೋ ಲನಗಳ ಜೊತೆಗೆ ಆಟ ಅದರ ಪಾಡಿಗೆ ಅದು ಮುಂದುವರಿಯುತ್ತಿತ್ತು. ಭಾಗ ವತರು ಮದ್ದಳೆ ಬಾರಿಸುತ್ತ,

"ಹರಿಯು ಜರೆದು ವಿಧಿಯ ಶಿರವ ಕರದೆ ಕುಟ್ಟುತ
ದುರುಳಯಾಚಕಾಳಿಯನ್ನು ಧರೆಗೆ ಕೆಡಹುತ"

ಎಂದು ಹಾಡುತ್ತಿರಲು ದಕ್ಷನೂ ವೀರಭದ್ರನೂ ಕುಣಿತಕ್ಕೆ ಮೊದಲು ಮಾಡಿ ದರು. ಇವರು ಕುಣಿಯುತ್ತಿದ್ದಂತೆಯೇ ಅಲ್ಲಿ ನೆರೆದಿದ್ದ ದೇವತೆಗಳು 'ಸತ್ತು ಬಿದ್ದು' ಎದ್ದು ಹೋಗುತ್ತಿದ್ದರು. ಭಾಗವತರು ಪದಹೇಳಿ ಮುಗಿಸಿ ಕುಣಿತಕ್ಕೆ ಮುಗುತಾಯ ಕೊಡೋಣವೆಂದರೆ ಇಬ್ಬರೂ ಕುಣಿಯುತ್ತಲೇ ಇದಾರೆ. ಶಿವುಗ ನಂತೂ ನೂರುಮಡಿ ಹುರುಪಿನಿಂದ "ಎಲಾ ನೀಚ ದಕ್ಷಾ" ಎಂದು ಕೂಗುತ್ತ ಹಲ್ಲು ಕಡಿಯುತ್ತ ಕುಣಿಯುತ್ತಲೇ ಇದ್ದಾನೆ—ಕಣ್ಣು ಕೆಂಡವಾಗಿವೆ. ಕೆಂಚ ಗಡಗಡ ನಡುಗಿದನು. ಆದರೂ ಅವನಂತೆಯೇ ಕುಣಿಕುಣಿದು ಸಾಕಾದನು. ಆಗ ದಕ್ಷ ಮಾತಾಡಬೇಕು, ಅದನ್ನೂ ಶಿವು ಮರೆತುಬಿಟ್ಟ. ಕೆಂಚ "ಶಿವಣ್ಣ ನೀನೀಗ ದಕ್ಷಕಣೋ ಬಿದ್ದ ಹಾಗಾದರೂ ಮಾಡೋ" ಎಂದು ಪಿಸುಮಾತಿ ನಲ್ಲಿ ಹೇಳಿದ. ಶಿವುಗನ ಕುಣಿತದ ಚುರುಕು ಇನ್ನೂ ಜಾಸ್ತಿಯಾಯಿತು, "ನೀಚಾ" ಎಂದು ಕೂಗುತ್ತಿದ್ದಾನೆ ಕುಣಿಯುತ್ತಲೇ ಇದ್ದಾನೆ. ಮದ್ದಲೆ ಯವನ ಕೈಗಳೂ ಚುರುಕಾಗುತ್ತಿವೆ. ಪರದೆಯ ಹಿಂದಿನಿಂದ "ಏ ಶಿವುಗಾ, ನೀನೇ ದಕ್ಷಕಣೋ ಬಿದ್ದಹಾಗೆ ಮಾಡೋ" ಎಂದು ಎಷ್ಟು ಕೂಗಿದರೂ ಶಿವುಗನಿಗೆ ಕೇಳಿದರೆ ತಾನೆ. ಆ ಸಮಯದಲ್ಲಿ ಗುಡುಗು ಸಿಡಿಲುಗಳೂ ಅವನಿಗೆ

ಕೇಳಿಸುತ್ತಿರಲಿಲ್ಲ. ಪ್ರೇಕ್ಷಕರೂ ಕಣ್ಣು ಬಾಯಿಬಿಟ್ಟುಕೊಂಡು ನೋಡುತ್ತಿದ್ದಾರೆ. ಇನ್ನೇನು ಯಾರೋ ಹೋಗಿ ಶಿವುಗನನ್ನು ಹಿಡಿದು ನಿಲ್ಲಿಸಬೇಕು. ಅಷ್ಟರಲ್ಲಿ ಕುಣಿಯುತ್ತಿದ್ದ ಕೆಂಚ "ಅಯ್ಯೋ" ಎಂದು ನೆಲಕ್ಕೆ ಧೊಪ್ಪನೆ ಬಿದ್ದ. ಶಿವುಗ ಇನ್ನೂ ಕುಣಿಯುತ್ತಲೇ ಇದ್ದಾನೆ! ಯಾರೋ ಹೋಗಿ ಅವನನ್ನು ಹಿಡಿದುಕೊಂಡು ಮುಖಕ್ಕೆ ನೀರೆರಚಿ, 'ನಿವಾಳಿ' ತೆಗೆದಮೇಲೆ ಎಚ್ಚರ ಬಂತು. 'ಕೆಂಚ' ಎನ್ನುತ್ತ ಅವನ ಕಡೆ ನೋಡುತ್ತಾನೆ. 'ಶಿವಣ್ಣ'ನಿಗೆ ತಾನು ಮಾಡಿದ ಮಹಾಪರಾಧದ ಅರಿವಾಯಿತು. "ಅಯ್ಯೋ ಕೆಂಚ" ಎಂದು ಅವನ ಮೇಲೆ ಬಿದ್ದು ಹೊರಳಾಡುತ್ತ ರೋದಿಸತೊಡಗಿದನು. ಆಗ ಜನ ಬಂದು ನೋಡುತ್ತಾರೆ: ಕೆಂಚನ ಎಡಪಕ್ಕೆಯಿಂದ ರಕ್ತ ಚಿಮ್ಮಿ ಬರುತ್ತಿತ್ತು. 'ಶಿವಣ್ಣ'ನ ಕತ್ತಿ ಕೆಂಚನ ಬಿಸಿ ರಕುತದಲ್ಲಿ ಮಿಂದಿತ್ತು.

ಆಗ ಕೆಂಚನ ಜೀವ ಹೋಗಿ ಹೋಗಿ ಬರುತ್ತಿತ್ತು. ಶಿವುಗನನ್ನು ಕುರಿತು "ಶಿವಣ್ಣ, ಯಾಕೆ ಹೀಗೆ ಮಾಡಿದೆ" ಎನ್ನುತ್ತ ಕಣ್ಣೀರ್ಗರೆದ. ಶಿವಣ್ಣ ಏನು ಹೇಳುತ್ತಾನೆ? ಕಣ್ಣೀರಿನಿಂದಲೇ ಕೆಂಚನನ್ನು ಸ್ನಾನಮಾಡಿಸಿದ. ಹುಚ್ಚನಂತೆ ಅಳಲಾರಂಭಿಸಿದ. ತಾನು ಕಟ್ಟಿಕೊಂಡಿದ್ದ ವೇಷಭೂಷಣಗಳನ್ನೆಲ್ಲಾ ಕಿತ್ತು ಹರಿದು ಬಿಸಾಡಿ, ಸಣ್ಣ ಮಗುವಿನಂತೆ ಅತ್ತ—ಕಣ್ಣಿಂಗುವ ವರೆಗು. ಕೆಂಚನನ್ನು ತಂದೆ ಬಂದು ಏಳಿಸಹೋದ ಆಗಲಿಲ್ಲ. ಮಗನನ್ನು ತೊಡೆಯ ಮೇಲೆ ಮಲಗಿಸಿಕೊಂಡ, ಏನು ಮಾಡಿದರೂ ಕೆಂಚ ಉಳಿಯುವಂತಿರಲಿಲ್ಲ. "ಅಪ್ಪಾ ಶಿವಣ್ಣ ಏನು ಮಾಡಿಯಾನು? ದೇವರು ಕೊಟ್ಟೋನು, ಶಿವಣ್ಣನಿಗೆ ಆವೇಶ ಬಂದುಬಿಡ್ತು" ಎಂದ. ಶಿವಣ್ಣನ ಕೈ ತೆಗೆದುಕೊಂಡು ಹಾಗೇ ಕಣ್ಮುಚ್ಚಿದ. ನಾಟಕದ ಹೊರಪರದೆಯನ್ನು ಎಳೆದರು. ನೆರೆದಿದ್ದ ಜನವೆಲ್ಲ ಮರಮರ ಮರುಗುತ್ತ ತಮ್ಮ ತಮ್ಮ ಊರುಗಳಿಗೆ ತೆರಳಿದರು.

ಅಂದಿನಿಂದ ಶಿವುಗನ ಸುದ್ದಿಯೇ ಇಲ್ಲ. ಈಗ ಆ ಗಡಿವಾಡದಲ್ಲಿ ಯಾರೂ 'ದಕ್ಷಬ್ರಹ್ಮನ ಕಥೆ' ಆಡುವಹಾಗಿಲ್ಲ. ಒಕ್ಕಲುಕಾಲದಲ್ಲಿ ರಾತ್ರಿ ಹಾಲು ಬೆಳದಿಂಗಳು ಚೆಲ್ಲಿದಾಗ ಆ ಊರ ಕೋಲಾಟದ ಹುಡುಗರು ಕೆಂಚ ಶಿವುಗರ ಮೇಲೆ ಒಂದು ಲಾವಣಿಯನ್ನು ಮಾತ್ರ ಹಾಡುತ್ತಿರುತ್ತಾರೆ.